ಮನೋಹರ ಗ್ರಂಥಮಾಲೆಯ ೨೬ನೆಯ ಕುಸುಮ

# ಎರಡು ಧ್ರುವ

## ಭಾಗ ೧



ಅನುವಾದಕರು:

**ವ್ಹಿ. ಎಂ. ಇನಾಂದಾರ,** ಬಿ. ಎ.

ಅಕ್ಟೋಬರ ೧೯೩೭ — ಬೆಲೆ: ೧-೨-೦

ಸಂಪಾದಕರು :
ಜಿ. ಬಿ. ಜೋಶಿ
ಜಿ. ವಿ. ಹುಳಿಕಿ

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು :
ಶೇಷಗಿರಿರಾವ ಗೋವಿಂದರಾವ
ಕುಲಕರ್ಣಿ
ಸಾಧನ ಪ್ರೆಸ್, ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು .
ಶ್ರೀ. ದ. ರಾ. ಬೇಂದ್ರೆ, ಎಂ. ಎ.
,, ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.
,, ವಿ. ಕೃ. ಗೋಕಾಕ, ಎಂ. ಎ.
(ಇಂಗ್ಲಂಡದಲ್ಲಿ)

# ನಮ್ಮ ಮಾತು

ನಾನೊಮ್ಮೆ ಬಿಜಾಪುರಕ್ಕೆ ಹೋಗಿದ್ದಾಗ ನನ್ನ ಗೆಳೆಯರೊಬ್ಬರು ಶ್ರೀ. ವ್ಹಿ. ಎಂ. ಇನಾಂದಾರರನ್ನು ನನಗೆ ಪರಿಚಯಮಾಡಿಕೊಟ್ಟರು. ಆ ಪರಿಚಯದ ಫಲವಾಗಿಯೆ ಈ ಸುರಸವಾದ ಸಾಮಾಜಿಕ ಕಾದಂಬರಿಯನ್ನು ಕನ್ನಡಿಗರಿಗೆ ಸಲ್ಲಿಸುವ ಸುಯೋಗವು ಬಂದುದಕ್ಕಾಗಿ ನಾನು ಆನಂದಿಸುತ್ತೇನೆ. ನಾನೀಗಲೂ ಆ ಪರಿಚಯದ ಕ್ಷಣವನ್ನು ಆದರದಿಂದ ನೆನೆಯುತ್ತಲಿದ್ದೇನೆ: 'ನಿಮ್ಮಂತಹ ಬುದ್ಧಿವಂತರು ಇಂಗ್ಲೀಷಿನಲ್ಲಿ ಬರೆಯುವದಲ್ಲದೆ ಕನ್ನಡದಲ್ಲಿಯೂ ಬರೆದರೆ ಎಷ್ಟು ಚೆನ್ನಾಗಬಹುದು?' ಎಂದು ನಾನೆಂದೆ. ಅದಕ್ಕೆ ಅವರು 'ಬರೆದಿದ್ದೇನೆ, ಆದರೆ....' ಎಂದು ಅರ್ಧಕ್ಕೇ ನಿಂತರು. ನನಗೆ ಅರ್ಥವಾಯಿತು. 'ಏನದು ಬರೆದದ್ದು?' ಎಂದು ಕೇಳಿದೆ. 'ಮಹಾರಾಷ್ಟ್ರದಲ್ಲಿ ಹೆಸರು ಪಡೆದ ಶ್ರೀಮಾನ್ ವ್ಹಿ. ಸಿ. ಖಾಂಡೇಕರ ಅವರು ಬರೆದ 'ದೋನ್ ಧ್ರುವ್' ಎಂಬ ಸಾಮಾಜಿಕ ಕಾದಂಬರಿಯ ಅನುವಾದ ಮಾಡಿದ್ದೇನೆ. ಅದು ಒಳ್ಳೇ ಕಾದಂಬರಿ ಎಂದು ನನಗೆನಿಸಿತು.' ಎಂದು ಅವರು ಹೇಳಿದರು. ನನಗೆ ಕುತೂಹಲ ಹುಟ್ಟಿತು. 'ಹಾಗಾದರೆ ನೋಡೋಣ' ಎಂದೆ. ಕೊಟ್ಟರು. ಓದಿದೆ. ಒಟ್ಟಿನಲ್ಲಿ, ಕಥೆ, ಸ್ವಭಾವನಿರೂಪಣೆ, ಸೂಕ್ಷ್ಮ ನಿರೀಕ್ಷಕ ದೃಷ್ಟಿ— ಎಲ್ಲವೂ ಎದೆ ಮುಟ್ಟುವಂತೆ, ಹೌದು ಹೌದು ಎನಿಸುವಂತೆ ಇದ್ದವು. ನಮ್ಮ ಮಾಲೆಯಲ್ಲಿ ಅದನ್ನು ಪ್ರಕಟಿಸಲು ಕೇಳಿಕೊಂಡೆ. ಆದರೆ ಕೇಳುವಾಗ ಒಂದು ಮಾತು ಅವರಿಗೆ ಹೇಳಬೇಕಾಯಿತು. ಹೇಳಿದೆ. 'ಕನ್ನಡ ದೇಶಿಯ ಒಪ್ಪ ಅದಕ್ಕೆ ಹಾಕಬೇಕಾದರೆ ಬಲ್ಲವರಿಂದ ಅದನ್ನು ತಿದ್ದಿಸಬೇಕಾಗುತ್ತದಲ್ಲ?' ಎಂದು ನಾನು ಅಂದದ್ದಕ್ಕೆ ಭಾಷಾಂತರದ ಜವಾಬದಾರಿಯನೂ

ಸೂಕ್ಷ್ಮತ್ವವನ್ನೂ ಅರಿತ ಅವರು ಒಮ್ಮೆಲೆ ಒಪ್ಪಿಕೊಂಡರು. ನಾನು ಅಲ್ಲಿಂದ ಶ್ರೀ. ರಂ. ಶ್ರೀ. ಮುಗಳಿಯವರ ಹೆಸರನ್ನು ಆ ತಿದ್ದುವ ಕೆಲಸಕ್ಕಾಗಿ ಸೂಚಿಸಿದೆನು. ಶ್ರೀ. ಇನಾಂದಾರರು ಕೂಡಲೆ ಒಪ್ಪಿಕೊಂಡರು. ನಮ್ಮ ಬಿನ್ನಹಕ್ಕೆ ಶ್ರೀಮಾನ್ ಮುಗಳಿಯವರೂ ಒಪ್ಪಿಕೊಂಡು ಪರಿಶ್ರಮಪಟ್ಟು ತಿದ್ದಿ, ಹಸ್ತಪ್ರತಿಯನ್ನು ಪ್ರೆಸ್ಸಿಗಾಗಿ ಸಿದ ಪಡಿಸಿ ಕಳಿಸಿದರು. ಅವರ ತಿದ್ದುವ ಕಾರ್ಯದಲ್ಲಿ ಪ್ರೊ. ಜೋಗ, ವಿಲಿಂಗ್‌ಡನ್ ಕಾಲೇಜ ಸಾಂಗ್ಲಿ, ಇವರು ಅದೆಷ್ಟೊ ಸಹಾಯ ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ಕೃತಜ್ಞತೆಯ ಅಭಿವಂದನೆಗಳನ್ನು ಸಲ್ಲಿಸದೆ ಇರಲಾರೆನು. ಈ ರೀತಿಯಾಗಿ ಈ ಅನುವಾದವು ಎರಡು-ಮೂರು ಭಟ್ಟಿಗಳಲ್ಲಿ ಹಾಯ್ದು ಬಂದದ್ದರಿಂದ ಬಹುಮಟ್ಟಿಗೆ ಶುದ್ಧವಾಗಿದೆಯೆಂದು ನನ್ನ ವಿಶ್ವಾಸವಿದೆ.

ತಮ್ಮ ಈ ಕಾದಂಬರಿಯನ್ನು ಕನ್ನಡದಲ್ಲಿ ಭಾಷಾಂತರಿಸಲು ಏನೂ ಸಂಭಾವನೆಯನ್ನು ತೆಗೆದುಕೊಳ್ಳದೆ ಅನುಮತಿಯಿತ್ತ ಶ್ರೀಮಾನ್ ವಿ. ಸಿ. ಖಾಂಡೇಕರರಿಗೂ, ಅಖಂಡ ಶ್ರಮವಹಿಸಿ ಕನ್ನಡದಲ್ಲಿ ಅನುವಾದಿಸಿ ಕೊಟ್ಟ ಮತ್ತು ಹಸ್ತಪ್ರತಿಯನ್ನು ತಿದ್ದಿಸಲು ಸಹ ಅನುಮತಿಕೊಟ್ಟ ಶ್ರೀಮಾನ್ ವ್ಹಿ. ಎಂ. ಇನಾಂದಾರರಿಗೂ, ಕನ್ನಡ ದೇಶಿಯ ಒಪ್ಪಕ್ಕೆ ಒಪ್ಪುವ ಹಾಗೆ ತಿದ್ದಿ ಸರಿಪಡಿಸಿ ಪ್ರೆಸ್ಸಿಗೆ ಹಸ್ತಪ್ರತಿಯನ್ನು ತಯಾರಿಸಿದ ಶ್ರೀಮಾನ್ ರಂ. ಶ್ರೀ. ಮುಗಳಿಯವರಿಗೂ, ಮತ್ತು ಅವರ ತಿದ್ದುವ ಕಾರ್ಯದಲ್ಲಿ ನೆರವಾದ ಪ್ರೊ. ಜೋಗ ಇವರಿಗೂ ನಾನು ಮನೋಹರ ಗ್ರಂಥಮಾಲೆಯ ಪರವಾಗಿ ಹೃತ್ಪೂರ್ವಕವಾಗಿ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ನಮ್ಮ ಮಾಲೆಗೆ ಈ ದೊಡ್ಡ ಪುಸ್ತಕವನ್ನು ದಯಪಾಲಿಸಿದ್ದಕ್ಕಾಗಿ ನಾನು ಶ್ರೀ. ವ್ಹಿ. ಎಂ. ಇನಾಂದಾರರಿಗೆ ಇನ್ನೊಮ್ಮೆ ನನ್ನ ಅನಂತ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

**ಜಿ. ಬಿ. ಜೋಶಿ**
ಸಂಪಾದಕ

ಮನೋಹರ ಗ್ರಂಥಮಾಲೆಯ ೫ನೆಯ ವರ್ಷದ

೩ನೆಯ ಕುಸುಮ

# ಎರಡು ಧ್ರುವ

ಭಾಗ ೧

ಅನುವಾದಕರು:

**ಶ್ರೀ. ವ್ಹಿ. ಎಂ. ಇನಾಂದಾರ**

ಬಿ. ಎ.

# ಎರಡು ಧ್ರುವ

## ೧

## ಜ್ವಾಲಾಮುಖಿಯ ಸ್ಫೋಟ

'ಪೋರಾ, ಏ ಬಾಯ್!' ಎಂಬ ಉಚ್ಚಸ್ವರದ ಕೂಗು ರಮಾಕಾಂತನ ಬರೆಯುವ ಕೋಣೆಯಿಂದ ಕೇಳಬಂದಿತು. ಕೂಡಲೆ ಗಂಟೆಯು ಖಣಖಣ ಬಾರಿಸಿತು. ಅಡಿಗೆಮನೆಯಲ್ಲಿ ಸ್ವಲ್ಪೇನೊ ಆರದೆ ಇದ್ದ ತನ್ನ ಕೂದಲಿನ ಬುಚಡ ಕಟ್ಟುತ್ತ ಪತ್ನಲೆಯು ಕುಳಿತಿದ್ದಳು. ಆ ಕೂಗು ಕೇಳಿ ಸ್ಟೇಶನ್ನದ ಮೇಲಿನ ಗೊಂದಲವು ಅವಳಿಗೆ ನೆನಪಾಯಿತು. ಹೇಗೊ ಹೇಗೊ ಬುಚಡ ಕಟ್ಟಿಕೊಂಡು ಅವಳು ಕುತೂಹಲದಿಂದ ಬಾಗಿಲಲ್ಲಿ ನಿಂತಳು.

ಪೋರನು ಓಡುತ್ತಲೇ ಬಂದ. ಅವನಿಗೆ ನೆಟ್ಟಗೆ ಠಸಿಕೆ ಹತ್ತಿತ್ತು. ಅದರ ಕಾರಣ ಮುಪ್ಪೇನೂ ಅಲ್ಲ! ಸಾಸಿರಪಾಲಿಗೆ ಅದರ ಉಗಮವು ರಮಾಕಾಂತನು ಸೇದಿ ಒಗೆದ ಸಿಗರೇಟಿನ ತುಣುಕಿರಬೇಕು. ಆದರೆ ಋಷಿಯ ಕುಲವನ್ನೂ ಠಸಿಕೆಯ ಮೂಲವನ್ನೂ ಹುಡುಕದೆ ಇರುವದೇ ಒಳ್ಳೆಯದು. ದೀನ–ದುರ್ಬಲರ ಕೈವಾರಿಯಾದ ಯಾವನಾದರೊಬ್ಬ ಕಥಾಲೇಖಕನು ಆ ಹುಡುಗನ ಕೆಮ್ಮು ಕೇಳಿದ್ದರೆ ಅದರ ಮೇಲೆ ಅವನೊಂದು ಕರುಣಕಥೆಯನ್ನೇ ಬರೆಯುತ್ತಿದ್ದನು. 'ವಿಪರೀತ ಛಳಿ! ಬಡವನಿಗೆ ಬೆಚ್ಚನ್ನ ಸ್ವೆಟರ್ ಎಲ್ಲಿಂದ ಸಿಗಬೇಕು? ತಣ್ಣಗಿನ ಫರಸಿಯ

ಮೇಲೆ ಕುಳಿತು, ಚಳಿಯಲ್ಲಿ ತಿರುಗಾಡಿ, ಆ ಹುಡುಗನಿಗೆ ಥಂಡಿಯಾಗುತ್ತದೆ. ಆವನು ಕೆಮ್ಮುಹತ್ತುವನು. ಕೆಮ್ಮಿನ ಮುಂದಿನ ಹೆಜ್ಜೆ 'ನ್ಯುಮೋನಿಯಾ!' ಅಯ್ಯೋ ಪಾಪ ಬಡ ಹುಡುಗ! ಈ ಹುಡುಗನನ್ನು ಯಾರು ಕೊಂದರು?'

ರಮಾಕಾಂತನು ಲೋಕಪ್ರಿಯ ಕಥಾಲೇಖಕನಿದ್ದನಲ್ಲದೆ ಇನ್ನು ಮುಂದೆ ನಾಟಕಕಾರನೂ ಆಗುವವನಿದ್ದನು. ಆದರೆ 'ಈ ಹುಡುಗನನ್ನು ಯಾರು ಕೊಂದರು?' ಈ ಪ್ರಶ್ನೆ ಆವನಿಗೆ ಈಗ ಹೊಳೆಯಲೇ ಇಲ್ಲ. ತಿರುಗಿ, ಆವನು ತಡಮಾಡಿದ್ದಕ್ಕೆ ಆವನ ಮೋರೆಗೆ ಒಂದು ಒಳ್ಳೇ ಏಟು ಕೊಡಬೇಕೆಂಬ ವಿಚಾರವು ಮಾತ್ರ ಆವನ ತಲೆಯಲ್ಲಿ ಸುಳಿದು ಹೋಯಿತು.

'ಛೋಕರಾ—'

'ಜೀ ಸಾಬ್—'

'ನಾಳೆ ನಿನ್ನನ್ನು ಡಾಕ್ಟರರ ಕಡೆಗೆ ಕಳಿಸುತ್ತೇನೆ!'

ಹುಡುಗನು ಅಂಜಿ ದೀನದೃಷ್ಟಿಯಿಂದ ರಮಾಕಾಂತನನ್ನು ನೋಡತೊಡಗಿದನು.

'ಇತ್ತಿತ್ತಲಾಗಿ ನಿನಗೆ ಕಡಿಮೆ ಕೇಳಿಸುವದೇನು?'

'ಇಲ್ಲ ರಾವುಸಾಬ್'

'ಹಾಗಾದರೇನು ದೀಪಹಚ್ಚುವ ಮೊದಲು ನಿದ್ದೆ ಬರಹತ್ತಿತೇನು? ಅದಕ್ಕೂ ಔಷಧ ಬೇಕಲ್ಲ!'

'ಒಬ್ಬ ಹೆಣಮಗಳು ಹಾಡಿಕೋತ ಹೊಂಟಿದ್ದಳು—'

ರಮಾಕಾಂತನು ಸಕ್ಕು ಆವನ ಕಡೆ ನೋಡಿದನು. ಒಂದು ಕ್ಷಣ ಆವನಿಗೆ ತನ್ನ ವಿಷಯವಾಗಿ ಅಭಿಮಾನವೆನಿಸಿತು. ಯಾವನೋ ಒಬ್ಬ ಸಂಸ್ಕೃತ ಪಂಡಿತನ ಮನೆಯ ಗಿಳಿ—ಮೈನಾಗಳು ಕೂಡ ವೇದಾಂತದ ಚರ್ಚೆಯನ್ನು ಮಾಡುತ್ತಿದ್ದುವೆಂಬ ಸಂಗತಿಯು ಆವನಿಗೆ ನೆನಪಾಯಿತು. ತನ್ನ ಮನೆಯ ಆಳುಮಗನಿಗೆ ಸಹ ಇಷ್ಟು ಹಾಡಿನ ನಾದವಿದೆ! ಆದರೆ ಬೇಸಿಗೆಯಲ್ಲಿ ತಂಪುಗಾಳಿಯ ಹಿಂದೆಯೇ ಭರ್ರನೆ ಝಳವು ಬರುವಂತೆ

ಆವನ ತಲೆಯಲ್ಲಿ ಮತ್ತೊಂದು ವಿಚಾರವು ಬಂದಿತು. ಆವನು ತಿರಸ್ಕಾರ ದಿಂದ ಅಡಿಗೆಮನೆಯ ಕಡೆಗೆ ನೋಡಲು ಬಾಗಿಲಲ್ಲಿ ನಿಂತಿದ್ದ ವತ್ಸಲೆಯು ಆವನಿಗೆ ಅರ್ಧಮರ್ಧ ಕಾಣಿಸುತ್ತಿದ್ದಳು.

'ಕಂಪನಿ ಗೊತ್ತದೆ ಅಲ್ಲೇನೊ ನಿನಗೆ?' ರಮಾಕಾಂತ ಕೇಳಿದ.

'ಅದ, ಸಾಹೇಬ, ನಾನs ಅಲ್ಲೇನ್ರಿ ಅರಿಬಿ ಅಲ್ಲಿ ಕೊಟ್ಟಬರತೇನಿ'

'ಕತ್ತೇ, ವಾಶಿಂಗ್ ಕಂಪನಿ ಅಲ್ಲ! ನಾಟಕ ಕಂಪನಿ. ಹೋದ ತಿಂಗಳು ಆ ಬಾಯಿಯವರು ಬಂದಿದ್ದರು ನೋಡು ನಮ್ಮ ಕಡೆ, ನೀ ಕಳಿಸಲಿಕ್ಕೆ ಹೋಗಿದ್ದಿ ಅವರನ್ನು—'

'ಹೋಹೋ, ಅವರ್ರೇ, ಥಕಪಕ ಮಿಂಚು ಹೌಂದಲ್ಲರಿ?'

'ಸಾಕುಮಾಡು ನಿನ್ನ ವರ್ಣನಾ. ಅವರ ಮನೆಗೆ ಹೋಗಿ ಈ ಚೀಟಿ ಕೊಡು ಅವರಿಗೆ. ನಡೆ, ಓಡು ಲಗುಲಗು'

ಹುಡುಗನು ಕೋಣೆಯ ಹೊರಗೆ ಬಂದು ಜಿನೆ ಇಳಿಯುವಷ್ಟರಲ್ಲಿ 'ಏ, ಇಲ್ಲಿ ನೋಡು. ಆ ಮೂಲೆಯೊಳಗಿನ ಸಲೂನದಲ್ಲಿ ನಾ ಇದೇ ಈಗ ಬರುವೆನೆಂದು ಹೇಳಿ ಹೋಗು. ವಿಠ್ಠ್ಯಾ ಎಲ್ಲಿಯಾದರೂ ಹೋಗಿದ್ದರೆ ಕರೆದುಕೊಂಡು ಬಾ ಅಂತ ಹೇಳು ಅವನಿಗೆ' ರಮಾಕಾಂತನ ಈ ಕಡೆಯ ಮಾತು ವತ್ಸಲೆಗೆ ಸ್ಪಷ್ಟ ಕೇಳಿಸಿತು. ವಿಠ್ಠ್ಯಾನ ಹೊರತು ಬೇರೆ ಯಾರು ಕೂದಲು ಕತ್ತರಿಸಿದರೂ ಅದು ತನ್ನ ಗಂಡನ ಮನಸ್ಸಿಗೆ ಬರುವದಿಲ್ಲೆಂಬ ವರ್ಷದ ಹಿಂದಿನ ಮಾತು ಅವಳಿಗೆ ನೆನಪಾಯಿತು. ಆದರೆ ಈಗ ಸಂಜೆಯ ಹೊತ್ತಿಗೆ ಕ್ರಾಪು ಮಾಡಿಸಿಕೊಂಡು ಇವರು ಹೋಗುವದಾದರೂ ಎಲ್ಲಿಗೆ ಎಂಬುದು ಅವಳಿಗೆ ಏನೂ ತೋಚಲಿಲ್ಲ.

ಇಷ್ಟರಲ್ಲಿ ರಮಾಕಾಂತನು ತನ್ನ ಕೋಣೆಯಿಂದ ಹೊರಬಿದ್ದನು. ಆವನು ಬಾಗಿಲನ್ನು ಮುಂದೆಮಾಡಿಕೊಂಡು ಜಿನೆ ಇಳಿಯುವದಕ್ಕೆಂದು ಹೊರಳುವಷ್ಟರಲ್ಲಿ ಅವನ ಹಾಗೂ ವತ್ಸಲೆಯ ದೃಷ್ಟಿಗಳು ಕೂಡಿದವು. ಆವನ ದೃಷ್ಟಿಯಲ್ಲಿಯ ವಿಷದ ಬಾಣವು ತಟ್ಟನೆ ವತ್ಸಲೆಯ ಮರ್ಮಕ್ಕೆ ಮುಟ್ಟಿತು. ಮೊದಲೇ ಭಗ್ನವಾದ ಅವಳ ಹೃದಯದಿಂದ ರಕ್ತವು ಹರಿಯ ತೊಡಗಿತು. ರಮಾಕಾಂತನು ಜಿನೆಯನ್ನು ಇಳಿಯುತ್ತಿರಲು ಅವನ

ಚಪ್ಪಾಳೆಗಳ ಚಟಚಟ ಸಪ್ಪಳವು ಅವಳಿಗೆ ಭಯಂಕರವೆನಿಸಿತು. ಅವನು ಅವಳ ಹೃದಯವನ್ನು ತುಳಿದು ಹೋಗುತ್ತಿದ್ದನೇನೊ ಎನ್ನುವಂತೆ.

ಕಟಾಂಜನಕ್ಕೆ ಆತುಕೊಂಡು ಅವಳು ಉದಾಸ-ದೃಷ್ಟಿಯಿಂದ ಹೊರಗೆ ನೋಡಹತ್ತಿದಳು. ಸಂಜೆಯು ಮೋರೆಮುದುಡಿದ ಮುದುಕಿಯಂತೆ ಮುಂಬಯಿ ನಗರವನ್ನು ಪ್ರವೇಶಮಾಡುತ್ತಿತ್ತು. ಬೀದಿಯ ಮೇಲೆ ಅತ್ತಿಂದಿತ್ತ ನಡೆದಿರುವ ಅಸಂಖ್ಯ ಜನಗಳು! ಆ ಮುದುಕಿಯ ಹೃದಯದೊಳಗಿನ ಅನಂತ ಆಶೆಗಳೇ ಅವು! ವತ್ಸಲೆಯು ಎದುರಿನ ಮನೆಯ ಕಾಜಿನ ಹರಳುಗಳ ಕಡೆ ನೋಡಿದಳು. ಎರಡು ತಾಸಿನ ಹಿಂದೆ ಸೂರ್ಯನ ಕಿರಣಗಳಲ್ಲಿ ಅವು ಲಕಲಕಿಸುತ್ತಿದ್ದವು. ಆದರೆ ಈಗ? ಪ್ರಾಣವು ಹೋದ ಮೇಲೆ ಕಾಣುವ ಕಣ್ಣುಗಳಂತೆ ಅಮಂಗಳವಾಗಿ ತೋರಿದವು. ಅವನ್ನು ನೋಡುತ್ತ ನೋಡುತ್ತ ಅವಳ ಮನಸ್ಸಿನಲ್ಲಿ ಬಂದಿತು—ನನ್ನ ಆಶೆಗಳೂ ಈ ಕಾಜಿನ ಹರಳುಗಳೂ ಒಂದೇ ಅಲ್ಲವೇ? ಈ ಹರಳು ನಾಳೆ ಮತ್ತೆ ಹೊಳೆಯಬಹುದು; ಆದರೆ ನನ್ನ ಆಶೆಗಳು? ಲಗ್ನದ ಹೊತ್ತಿಗೆ ನಾನು ಆದೆಷ್ಟು ಮನೋರಾಜ್ಯಗಳನ್ನು ಕಟ್ಟಿದೆ! ನಾನೇನೂ ಯಾರದಾದರೂ ಅಡಿಗೆಯವಳಾಗಲಿಕ್ಕೆ ಹುಟ್ಟಿಬಂದಿಲ್ಲವೆಂದು ನಮ್ಮ ನೊಕ್ಕಿನ ಸೋದರತ್ತೆಗೆ ಆದೆಷ್ಟು ಬಿಂಕದಿಂದ ಹೇಳಿದೆ. ಆದರೆ ಮನೋರಾಜ್ಯಗಳೆಂದರೆ ಮಂಜಿನ ಹನಿಗಳು. ಮಂಜುಹನಿಗಳ ಹಾರಗಳು ಜಗತ್ತಿನಲ್ಲಿ ಯಾರಾದರೂ ಕೊರಳಲ್ಲಿ ಹಾಕಿಕೊಳ್ಳಲು ಸಿಗುವವೆ? ಮನಸ್ಸಿನಲ್ಲಿ ನಾನು ಸಾವಿರಾರು ಗೋಪುರಗಳನ್ನು ಕಟ್ಟಿದೆ. ಆದರೆ ಅವು ನಿಂತ ನೆಲದ ಅಂತರಂಗವು ನನಗೆ ಎಳ್ಳಷ್ಟು ಕೂಡ ತಿಳಿದಿರಲಿಲ್ಲ. ಆ ನೆಲವು ಅದುರಬಹುದು, ಅದರಲ್ಲಿ ಬಿರುಕು ಬೀಳಬಹುದು, ಆ ಬಿರುಕುಗಳೊಳಗಿಂದ ಗಂಧಕದ ಉಗ್ರವಾಸನೆಯು ಬರಬಹುದು—......ಬೀದಿಯಲ್ಲಿಯ ಒಂದು ದೃಶ್ಯದಿಂದ ವತ್ಸಲೆಯ ವಿಚಾರಗಳು ಬೇರೊಂದು ಹಾದಿಯನ್ನು ಹಿಡಿದವು. ಅಲ್ಲಿ ಹಾಯ್ದು ಹೋಗುವ ಇಬ್ಬರು ದಂಪತಿಗಳು ಮಲ್ಲಿಗೆ ಮಾಲೆಗಳನ್ನು ಮಾರುವ ಹುಡುಗನ ಹತ್ತಿರ ವ್ಯಾಪಾರ ಮಾಡುತ್ತಿದ್ದರು. ಗಂಡನು ಒಂದು ಮಾಲೆಯನ್ನು ಕೊಂಡು ಹೆಂಡತಿಯ ಕೈಯಲ್ಲಿ ಕೊಡಲು ಅವಳು ನಗನಗುತ್ತ ಅದನ್ನು

ಬುಜಪಕ್ಕೆ ಏರಿಸಿದಳು. ಅದೇನೊ ಆ ಮಾಲೆಯು ಅವರಿಬ್ಬರ ಅಂತಃಕರಣ ದಲ್ಲಿ ಅರಳಿದ ಪ್ರೀತಿಲತೆಯ ಹೂಗಳ ಮಾಲೆಯಾಗಿತ್ತು... ಈ ಮಧುರ ಅನುಭವವು ನನಗೇಕೆ ಸಿಗಬಾರದು? ಲಗ್ನವಾದಂದಿನಿಂದ ಇಂದಿನವರೆಗೆ ಅವರು ನನ್ನನ್ನು ದೂರದೂರವೇ ಇಡುತ್ತಿದ್ದಾರೆ. ಮೊದಲನೆಯ ಎರಡು ಮೂರು ತಿಂಗಳು ಇಲ್ಲಿಯೇ ಕಳೆದವು. ನಡುವೆ ಒಂದು ವರ್ಷ ಅವರು ಇಲ್ಲಿ, ನಾನು ಪಾಂಚಗಣಿಯಲ್ಲಿ. ಅವರನ್ನು ತನ್ನ ಕಡೆ ಎಳೆದುಕೊಳ್ಳುವ ಶಕ್ತಿಯು ತನ್ನಲ್ಲಿ ಯಾಕಿರಬಾರದು? ಗಾಳಿಗುಂಟ ಹಾರುವ ಪುಚ್ಛದಂತೆ ಅವರ ಮನಸ್ಸಿರಬಹುದು! ಆದರೆ ಆ ಪುಚ್ಛದ ಮೇಲೆಯೂ ಪೃಥ್ವಿಯ ಆಕರ್ಷಣವು ಇದ್ದೇ ಇರುತ್ತದೆ! ಇಲ್ಲವೇ?

ಮಾವನವರು ತೀರಿಕೊಂಡರು. ಪಾಂಚಗಣಿಯಿಂದ ನಾನು ಬಂದು ಎಂಟು ದಿವಸವಾದರೂ ನನ್ನ ಕೂಡ ಅವರು ಒಂದು ಅಕ್ಷರ ಸಹ ಆಡಿಲ್ಲ. ಇಂದಿನ ತನಕ ನಾನು ಅವರಿಂದ ಮುಚ್ಚಿಡುತ್ತಿದ್ದೆ. ಹೇಳುವ ಪ್ರಸಂಗವೇ ಸಿಕ್ಕಿದ್ದಿಲ್ಲ. ಆದರೆ ಈಪತ್ತು—ಹೌದು, ಈಗ ಹೋದ ಮೂರು ದಿವಸ ಕೂತು ಹೊತ್ತುಗಳೆಯುವದು ಜೀವದನುತ್ತು ಬಂದಿತ್ತು. ಮೊದಲು ಓದಿದ್ದರಲ್ಲಿ ಪಾಂಚಗಣಿಯಲ್ಲಿ ಓದಿದ್ದಿಷ್ಟು ಭರತಿಬಿತ್ತು. ತೀರ ಸಹಜವಾಗಿ ಆ ಕಥೆಯನ್ನು ಬರೆದುಬಿಟ್ಟೆ. ಅದನ್ನು ನೋಡಿದರೆ ಅವರಿ ಗೆಷ್ಟು ಆನಂದ ಆದೀತು! ತಮ್ಮಂಥ ಲೇಖಕನಿಗೆ ಒಪ್ಪುವಂಥ ಹೆಂಡತಿ ಈಕೆ ಎಂದು ಅನಿಸಿ ನನ್ನ ಮೇಲಿನ ಎಲ್ಲಾ ಸಿಟ್ಟನ್ನು ಅವರು ಬಿಟ್ಟುಬಿಡ ಬಹುದು; ಮತ್ತು—

ಆಶೆಯಿಂದ ದಾರವನ್ನು ಎಳೆದು ಹಿಡಿಯಿತೆಂದರೆ ಮನದ ಪಟವು ಎತ್ತರ ಆಕಾಶವನ್ನೇರಿ ಆಡತೊಡಗುತ್ತದೆ. ವತ್ಸಲೆಗೂ ಹಾಗೇ ಆಯಿತು. ಅವಳು ಅಡಿಗೆಮನೆಗೆ ಹೋಗಿ ತನ್ನ ಟ್ರಂಕು ತೆಗೆದು ಕೆಲವು ಕಾಗದ ಗಳನ್ನು ತಕ್ಕೊಂಡು ರಮಾಕಾಂತನ ಕೋಣೆಯ ಕಡೆಗೆ ಹೊರಳಿದಳು. ಒಳಗೆ ಕಾಲಿಡಬೇಕೊ ಇಡಬಾರದೊ ಎಂಬ ವಿಚಾರವು ಒಮ್ಮೆಲೆ ಅವಳ ಮನಸ್ಸಿನಲ್ಲಿ ಬಂದಿತು. ಆ ಕೋಣೆಯ ಗೋಡೆಗಳು ಒಂದರೊಂದರ ಕಿವಿಯಲ್ಲಿ ಹಳೆಯ ಮಾತುಗಳನ್ನು ಗುಜುಗುಜು ಮಾಡುತ್ತಿದ್ದಂತೆ ಅವಳಿಗೆ ಭಾಸವಾಯಿತು. ಆ ಮಾತುಗಳು—

'ಅಂದು ಹುಡುಗಿಯ ಆಯುಷ್ಯದಲ್ಲಿಯ ಹುಣ್ಣಿಮೆಯ ರಾತ್ರಿ. ಆದರೆ ತನ್ನ ಆಯುಷ್ಯದಲ್ಲಿ ಮಾತ್ರ ಅದು ಅಮಾವಾಸ್ಯೆಯಾಯಿತು. ರಮಾಕಾಂತನ ಮೊಟ್ಟಮೊದಲನೆಯ ಭೆಟ್ಟಿ! ತಾನು ಅರ್ಧ ನಾಚಿಕೆಯಿಂದ ಅರ್ಧ ಅಂಜಿಕೆಯಿಂದ ಮೂಲೆಯಲ್ಲಿ ನಿಂತಿದ್ದಳು. ತನ್ನ ಮೋರೆಯನ್ನು ಪತಿಯು ಅಂಗೈಯಲ್ಲಿ ಹಿಡಿದು ವಿದ್ಯುತ್ತಿನ ದೀಪದ ಕಡೆಗೆ ಅದನ್ನು ಹೊರಳಿಸಿ ನೋಡಿದ. ಅವರ ದೃಷ್ಟಿಯು ವಿಚಿತ್ರವಾಗಿತ್ತು. ಮೊದಲು ಕರುಣ-ಆ ಮೇಲೆ ಕ್ರೂರ! ತನ್ನ ರೂಪವು ಅವರಿಗೆ ಸೇರಿಲ್ಲವೆಂಬದು ಒಡೆದು ಕಾಣುತ್ತಿತ್ತು. ಅವರು ಸಂತಾಪದಿಂದ ಅಂದರು 'ಇದ್ದಲಿಯ ಉಪಯೋಗವು ಅಡಿಗೆ ಮನೆಯಲ್ಲಿ. ಮಹಾಲಿನಲ್ಲಿ ಅಲ್ಲ!'

ಆ ಪೆಟ್ಟು ಅಸಹ್ಯವೆನಿಸಿ ತಾನು ಎಂದಳು 'ಕೋಗಿಲೆಗಳೂ ಕರ್‍ರಗಿರುತ್ತವೆ.'

'ಆದರೆ ಅವುಗಳ ಕಂಠವು ಕಾಗೆಯಂತೆ ಕರ್ಕಶವಿರುವದಿಲ್ಲ!'

ತನಗೆ ಬೆಳ್ಳಗಿನ ಬಣ್ಣವಿಲ್ಲ, ಹಾಡಲಿಕ್ಕೆ ಬರುವದಿಲ್ಲ, ಗಂಡನಿಗೆ ಬೇಕಾಗುವಂಥ ಯಾವೊಂದೂ ಗುಣವು ತನ್ನಲ್ಲಿ ಇಲ್ಲ ಎಂಬುದರ ಅರಿವು ಆ ಕ್ಷಣಕ್ಕೆ ತನ್ನ ಹೃದಯದಲ್ಲಿ ಕಠಾರಿಯಂತೆ ನೆಟ್ಟಿತು.

'ನಿಮ್ಮ ಮಾವ ಲಗ್ನದ ಹೊತ್ತಿಗೆ ಒಂದು ಪದಾರ್ಥ ಕೊಡಲಿಕ್ಕೆ ಮರೆತು ಬಿಟ್ಟರು!'

ಬಂದೂಕು ಹೊಡೆಯುವಾಗ ಗುರಿ ನೋಡುವಂತೆ ನೋಡಿ ಅವರು ತನ್ನನ್ನು ಕೇಳಿದರು.

'ಏನದು?' ತಾನು ವಿಚಾರಿಸಿದಳು.

ಲಗ್ನದ ವರೋಪಚಾರದಲ್ಲಿ ಏನಾದರೂ ಹೆಚ್ಚುಕಡಿಮೆಯಾದ್ದರಿಂದ ಇವರ ಪ್ರಕೃತಿಯು ಕೆಟ್ಟಿರಬಹುದೆಂಬ ಆಶೆಯು ತನ್ನ ಮನಸ್ಸಿನಲ್ಲಿ ಉತ್ಪನ್ನವಾಯಿತು.

'ವಿಷದ ಪುಡಿ' ನಗುನಗುತ್ತ ಅವರು ಉತ್ತರ ಕೊಟ್ಟರು.

ಆ ಶಬ್ದಗಳನ್ನು ಕೇಳಿ ತನ್ನ ಕಣ್ಣುಗಳು ಅದೆಷ್ಟು ಶೂನ್ಯವಾದವು!

'ನಾನು ಬದುಕಬೇಕೆಂದು ನಿನ್ನ ಇಚ್ಛೆ ಇರುವದಲ್ಲವೆ?'

ತನ್ನ ಬಾಯಿಂದ ಬಿಕ್ಕುಗಳ ಹೊರತು ಮತ್ತೇನೂ ಹೊರ ಜೀಳಲಿಲ್ಲ.

'ನನ್ನದು ಕೇಳತೀ ಒಂದು ಮಾತು?'

'ಹುಂ'

ಅವರ ಕಾಲಮೇಲೆ ತನ್ನ ತಲೆಯಿಡಬೇಕೆಂದು ತಾನು ಮುಂದಾಗಿ ತಲೆ ಬಾಗಲು, ತನ್ನ ಸ್ಪರ್ಶವನ್ನು ತಪ್ಪಿಸಿಕೊಳ್ಳಲಿಕ್ಕೆ ಅವರು ಹಿಂದೆ ಸರಿದರು.

'ಆಣೆ ಮಾಡು ಹಾಗಾದರೆ! ಇನ್ನು ಮೇಲೆ ನನ್ನ ಕೋಣೆಯೊಳಗೆ ಕಾಲು ಹಾಕಬೇಡ'

ಆ ದಿವಸ ರಾತ್ರಿ ತಾನು ಕಟಕಟ ನಡುಗುತ್ತ ಕೋಣೆಯ ಹೊರಗೇ ಮಲಗಿದಳು. ರಾಯರ ಸಿಟ್ಟಿನ ಮೊದಲ ಉಕ್ಕು ಇಳಿದ ಮೇಲೆ ಎಲ್ಲವೂ ಸುಸೂತ್ರವಾಗುವದೆಂದು ತನ್ನ ಕಲ್ಪನೆಯಾಗಿತ್ತು. ಆದರೆ ಮುಂದೆ ಮಾವನವರ ಜಡ್ಡಿನ ದೆಸೆಯಿಂದ ತಾನು ಸಾಂಚಗಣಿಗೆ ಹೋಗ ಬೇಕಾಯಿತು.

ಆ ಪಣವನ್ನು ಯಾರಾದರೂ ಮುರಿಯಲೇಬೇಕು. ತಾನೇ ಮುರಿ ದರೆ ಏನು ತಪ್ಪು? ಈ ಕಥೆಯ ಕಾಗದಗಳನ್ನು ಒಯ್ದು ಅವರ ಟೇಬಲ್ಲಿನ ಮೇಲೆ ಇಡಬೇಕು. ಅವು ತಮ್ಮವೇ ಕಾಗದವೆಂದು ತಿಳಿದು ಅವರು ಓದಹತ್ತುವರು, ಆಗ ಇಂಥ ಮೋಜು ಆಗುವದು—ಒಣಗಿದ ಗಿಡವು ಅರೆಕ್ಷಣದಲ್ಲಿ ಚಿಗುರಿಬಿಟ್ಟಿತು.

ಮೆಲ್ಲನೆ ಹೆಜ್ಜೆಯಿಡುತ್ತ ವತ್ಸಲೆಯು ಕೋಣೆಯಲ್ಲಿ ಹೋದಳು. ಸಂಜೆಯ ಮುಸುಕು ಬೆಳಕಿನಲ್ಲಿ ಟೇಬಲ್ಲ ಮೇಲೆ ಹಾಕಿದ ಫೋಟೊ ನೋಡಿದಳು. ಮೊದಲು ಅಲ್ಲಿ ಅವಳ ಮಾವನ ಭಾವಚಿತ್ರವಿತ್ತು. ಈಗ ಒಬ್ಬ ಸುಂದರ ಸ್ತ್ರೀಯದು—ಹತ್ತಿರ ಹೋಗಿ ಕೆಳಗಿನ ಇಂಗ್ರಜಿ ಅಕ್ಷರ ಗಳನ್ನು ಅವಳು ಓದಿದಳು: 'ಚಿತ್ರಪಟ ತಾರೆ ಗ್ರೇಟಾ ಗಾರ್ಬೊ.' ಅವಳು ಕೋಣೆಯ ಸುತ್ತೆಲ್ಲ ದೃಷ್ಟಿ ಒಗೆದಳು. ಮಾವಂದಿರ ಫೋಟೊ ಅವಳಿಗೆ ಎಲ್ಲಿಯೂ ಕಾಣಲಿಲ್ಲ. ಎಲ್ಲಿ ನೋಡಿದರೂ ಸಿನೇಮಾ ನಟಿಯರ ಫೋಟೊಗಳನ್ನೂ ಸುಂದರವಾದ ಶೃಂಗಾರಿಕ ಚಿತ್ರಗಳನ್ನೂ ಹಚ್ಚಿತ್ತು.

ಖುರ್ಚಿ, ಟೇಬಲ್ಲು, ಕೋಚ, ಫೋಟೊ, ಅದೇಕೆ ಟೇಬಲ್ಲ ಮೇಲಿನ ಆ ಸುಂದರ ಹಸರು ಮಸಿ, ಆ ಗುಲಾಬೀ ನೋಟಪೇಪರು, ಆ ಕೋಣೆ ಯಲ್ಲಿಯ ಪ್ರತಿಯೊಂದು ವಸ್ತುವು ರಮಾಕಾಂತನ ಸೌಂದರ್ಯಾಸಕ್ತಿಗೆ ಸಾಕ್ಷಿಯಾಗಿತ್ತು. ಟೇಬಲ್ಲ ಮೇಲಿನ ಸಿಗರೇಟ ಡಬ್ಬಿಯನ್ನು ಅವಳು ಸಹಜವಾಗಿ ಎತ್ತಿದಳು. ಅದರ ಮೇಲೆ ತುಟಿಗೆ ತುಟಿ ಹಚ್ಚಿ ಮಾತಾ ಡುವ ದಂಪತಿಗಳ ಚಿತ್ರವೊಂದು ಕೊರೆದಿತ್ತು. ಆ ಜೋಡನ್ನು ನೋಡಿ ದೊಡನೆ ವತ್ಸಲೆಯ ಹೃದಯದಲ್ಲಿ ಹೇಗೊ ಹೇಗೊ ಆಯ್ತು. ತನ್ನ ಲಗ್ನವಾಗಿ ವರ್ಷದ ಮೇಲಾಯಿತು. ಆದರೆ ರಮಾಕಾಂತನು ಒಮ್ಮೆ ಯಾದರೂ ತನ್ನನ್ನು....

ಮೇಜಿನ ಮೇಲಿನ ಗುಲಾಬೀ ನೋಟಪೇಪರನ್ನು ಅವಳು ಎತ್ತಿ ನೋಡಿದಳು. ಜಾಜೀಹೂವಿನ ಹಾಗೆ ಮಂದಮಧುರವಾದ ಅದರ ಸುಗಂಧವು ಅವಳಿಗೆ ಮೋಹಕವೆನಿಸಿತು. ಅವಳಿಗೆ ತಿಳಿಯದಂತೆ ಆಶೆಯು ಕ್ಷಣಾರ್ಧದಲ್ಲಿ ಅವಳ ಕಣ್ಣ ಮುಂದೆ ಒಂದು ಚಿತ್ರವನ್ನು ನಿಲ್ಲಿಸಿತು. ರಮಾಕಾಂತನ ಭುಜದಮೇಲೆ ಕೊರಳನ್ನಿಟ್ಟು ತಾನು ಅವನನ್ನು ನೋಡು ತ್ತಿದ್ದಾಳೆ, ಜಾದುವಿನಿಂದ ತುಂಬಿದ ಹಾಗೆ ಅವನ ಮೋರೆಯು ಮೆಲ್ಲ ಮೆಲ್ಲಗೆ ಕೆಳಗೆ ಬರುತ್ತಿದೆ, ಅವನ ಕೂದಲಿನ ಮಾದಕ ಸುಗಂಧವನ್ನು ಅನುಭವಿಸಿ ತಾನು ಕಣ್ಣು ಮುಚ್ಚುತ್ತಿರುವಳು—

ಕಾಗದವನ್ನಿಡಬೇಕೆಂದು ಅವಳು ಮೇಜನ್ನು ನಿಟ್ಟಿಸಲು ಒಂದು ನೋಟಪೇಪರಿನ ಮೇಲೆ ಏನನ್ನೊ ಬರೆದಿತ್ತು. ಒಮ್ಮೆ ಅನಿಸಿತು— ಇದ್ದೀತು ಯಾರಿಗಾದರೂ ಬರೆದ ಪತ್ರ. ಕೂಡಲೆ ಹೊಳೆಯಿತು—ಸಂಜೆಯು ಮುಂದೆ ಸವಾರಿಯು ಕ್ರಾಪು ಕತ್ತರಿಸಿಕೊಳ್ಳಲು ಹೋಗಿದೆ. ಅಂದ ಮೇಲೆ ಈ ಹೊತ್ತು ಎಲ್ಲಿಯಾದರೂ ನಾಟಕ, ಜಲಸಾ, ಮೇಜವಾನೀ ಏನಾದರೂ ಇರಲಿಕ್ಕೆಬೇಕು. ಪತ್ರ ನೋಡಿದರೆ ಏನಾಗುತ್ತದೆ ಅಷ್ಟೊಂದು?

ಕಿಡಿಕಿಯ ಹತ್ತಿರ ಹೋಗಿ ಅವಳು ಆ ಪತ್ರವನ್ನು ಓದಹತ್ತಿದಳು. ಅದರ ಕೆಳಗಿನ ಕೆಲವು ಭಾಗವನ್ನು ಕಾಟು ಹಾಕಿತ್ತು. ಇದರಿಂದ ರಮಾ ಕಾಂತನು ಆ ಪತ್ರದ ಎರಡನೆಯ ನಕಲನ್ನು ಮಾಡಿರಬೇಕು. ನಲೂನಿಗೆ

ಹೋಗುವ ಗಡಿಬಿಡಿಯಲ್ಲಿ ರದ್ದುಮಾಡಿದ ಈ ಪತ್ರವನ್ನು ಹರಿದೊಗೆಯಲಿಕ್ಕೆ ಮಾತ್ರ ಅವನು ಮರೆತಿದ್ದನು. ಆ ಪತ್ರವನ್ನು ಓದುತ್ತ ಓದುತ್ತ ವತ್ಸಲೆಯು ಥರಥರ ನಡುಗಹತ್ತಿದಳು.

'ಪ್ರಿಯ ಸುರಂಗಾ,

ಇಂದು ಹುಣ್ಣಿವೆ. ಹಿಂದೆ ವಚನಕೊಟ್ಟದ್ದು ನೆನಪಿದೆಯೆ? ಒಂಬತ್ತುಗಂಟೆಗೆ ಜುಹೂಕ್ಕೆ ಮೋಟರಿನಿಂದ ಹೋಗೋಣ. ಬರೀ ಇಬ್ಬರೇ! ನಾನು ಮತ್ತು ನೀನು. ಜಗತ್ತಿನಲ್ಲಿ ಒಬ್ಬೊಂಟಿಯಾದ ಮನುಷ್ಯನಿಗೆ ಆತ್ಮಹತ್ಯೆಮಾಡಿಕೊಳ್ಳಬೇಕೆನಿಸುತ್ತದೆ. ಆದರೆ ಇಬ್ಬರು ಮನುಷ್ಯರು ಪೃಥ್ವಿಯ ಮೇಲೆ ಸ್ವರ್ಗವನ್ನು ನಿರ್ಮಾಣಮಾಡಬಲ್ಲರು. ಈ ಇಬ್ಬರ ನಡುವೆ ಮೂರನೆಯವರು ಯಾರೇ ಬಂದರೆ ಅವರನ್ನು ಕಡಿದು ಚೆಲ್ಲಬೇಕೆಂಬ ಇಚ್ಛೆ ಹುಟ್ಟುತ್ತದೆ. ಮುಂದಿನ ನಾಟಕದಲ್ಲಿ ನಾಯಕ ನಾಯಿಕೆಯರ ಬೆಳದಿಂಗಳ ಪ್ರವೇಶವನ್ನು ನಾನು ಹಾಕುವವನಿದ್ದೇನೆ. ಅದರ ಕಲ್ಪನೆಯನ್ನು ಈ ಹೊತ್ತು ನಿನಗೆ ಹೇಳುವೆನು. ಹೌದು, ಒಂದು ಮಾತ್ರ ಅಂಜಿಕೆ. ಚಂದ್ರನು ನಿನ್ನನ್ನು ನೋಡಿ ನಾಚಿಕೊಂಡು ಮೋಡದಲ್ಲಿ ಅಡಗಿ ಕುಳಿತನೆಂದರೆ ಜುಹೂದ ಉಸುಬಿನಲ್ಲಿ ನಾವಿಬ್ಬರೂ ಕತ್ತಲೆಯಲ್ಲಿ ಸಿಕ್ಕೇವು. ಆದರೆ ನೀನು ಕತ್ತಲೆಗೆ ಅಂಜುವದು ಅಷ್ಟರಲ್ಲೇ ಇದೆ ಎನ್ನು. ಮಳೆಯಲ್ಲಿ ತೋಯಿಸಿಕೊಳ್ಳುತ್ತ ಚಾರುದತ್ತನ ಮನೆಗೆ ಹೋಗುವ ವಸಂತಸೇನೆ ನೀನು! ನಿನ್ನ ಆ ಪ್ರವೇಶಕ್ಕೆ ಇಡೀ ಮುಂಬಯಿ ಪಟ್ಟಣವು ಇಂದು ತಲೆದೂಗುತ್ತದೆ. ಅಂದ ಮೇಲೆ..

ಮುಂದಿನ ಸಮಾಚಾರದಲ್ಲಿ ಬಹಳ ಕಾಟು ಹಾಕಿದ್ದು ಇತ್ತು. ಮೇಲಿನ ಸಾಲುಗಳ ಮೇಲೆ ಬರೀ ಒಂದು ಗೆರೆಯೆಳೆದದ್ದರಿಂದ ಸಹಜವಾಗಿ ವತ್ಸಲೆಯು ಅದನ್ನು ಓದಿದಳು. ಓದಿದ ಮೇಲೆ ಅವಳಿಗೆ ಎನಿಸಿತು— ಹೀಗೇ ಹೋಗಿ ಗ್ಯಾಲರಿಯಿಂದ ಕೆಳಗೆ ಹಾರಿಬಿಡಬೇಕು. ಅಂದರೆ ಕ್ಷಣದಲ್ಲಿ ಈ ನಾಚಿಕೆಯ ಬಾಳುವೆಯ ಅಂತವಾದರೂ ಆದೀತು. ಆದರೆ ಅವಳು ಕಟಾಂಜನದ ಮೇಲಿಂದ ಬಾಗಿ ನೋಡುವದಕ್ಕೂ ರಮಾಕಾಂತನು

ತಿರುಗಿ ಬರುವದಕ್ಕೂ ಗಂಟುಬಿದ್ದಿತು. ಪಾವಟಿಗೆಯ ಮೇಲೆ ಹೆಜ್ಜೆಯ ಸಪ್ಪಳವು ಕೇಳಹತ್ತಿತು. ಚಟ್ಟನೆ ಹೋಗಿ ಅಡಿಗೆ ಮನೆಯಲ್ಲಿ ಅಡಗ ಬೇಕೆಂದು ಅವಳ ಮನಸ್ಸಿಗೆ ತೋರಿತು. ಕೂಡಲೆ ಎನಿಸಿತು–ಜನ್ಮವೆಲ್ಲಾ ಹೀಗೆ ಅಡಗಿಕೊಂಡೇ ಇರಬೇಕೆ? ಪುಕ್ಕಟೆ ಅಡಿಗೆಯವಳಾಗುವದಿದ್ದರೆ ಅನ್ನಛತ್ರದಲ್ಲಿ ಆ ಕೆಲಸ ಮಾಡಿದರೆ ತಪ್ಪೇನು? ಏನಾದದ್ದಾಗಲಿ, ಆಯುಷ್ಯದ ಸೋಕ್ಷಮೋಕ್ಷವನ್ನು ಈಗಿಂದೀಗ ಮಾಡಿಕೊಂಡುಬಿಡಬೇಕು.

ಕೋಣೆಯ ಬಾಗಿಲು ತೆರೆದದ್ದು ನೋಡಿ ರಮಾಕಾಂತನಿಗೆ ಆಶ್ಚರ್ಯವಾಯಿತು. ಒಳಗೆ ಬಂದು ದೀಪದ ಬಟನ್ ಒತ್ತುತ್ತ ಅವನು ಕೇಳಿದನು. 'ಯಾರದು?'

'ನಾನು'

'ಹೆಸರಿಲ್ಲವೇನೊ?'

'ಪೀಸಾಡಿ ಬಿಟ್ಟ ವಸ್ತು ಮನೆಯಲ್ಲಿ ಹೇಗದು ಇರುತ್ತದೆ?'

ವತ್ಸಲೆಯ ಸ್ವರದಲ್ಲಿ ಅವಳ ಅಂತಃಕರಣದ ವಿಷಾದವು ಮೂರ್ತಿಮಂತವಾಗಿ ಇಳಿದಿತ್ತು. ಇಷ್ಟರಲ್ಲಿ ದೀವಿಗೆಯ ಸ್ವಚ್ಛ ಪ್ರಕಾಶವು ರಮಾಕಾಂತನ ಮುಖದ ಮೇಲೆ ಬಿದ್ದಿತು. ಸಲೂನಿನಲ್ಲಿ ಅವನ ಕೂದಲಿಗೆ ಹಚ್ಚಿದ ಯಾವದೋ ಗಂಧದೆಣ್ಣೆಯ ಉಗ್ರವಾಸದಿಂದ ವತ್ಸಲೆಗೆ ತುಂಬಾ ಹೇಸಿಗೆಯಾಯಿತು. ವಿದ್ಯುತ್ತಿನ ಬೆಳಕಿನಲ್ಲಿ ಹೊಳೆಯುವ ಆ ಕೋಣೆಯೊಳಗಿನ ನಾಟಕೀ ಸೌಂದರ್ಯವೂ ಅವಳಿಗೆ ಅಷ್ಟೇ ಉಗ್ರವೆನಿಸಿತು.

'ಈ ಕೋಣೆಯೊಳಗೆ ಕಾಲಿಡಬಾರದೆಂದು ಹೇಳಿದ್ದಿಲ್ಲವೇ? ಸೀಡಕತನದಿಂದ ಅವನು ಕೇಳಿದನು.

'ಕಬೂಲಮಾಡಿದ್ದೆಲ್ಲಾ ನಡಸಲಿಕ್ಕೇ ಬೇಕೇನು?'

'ಹೌದೌದು'

'ಹಾಗಾದರೆ—ದೇವ ಬ್ರಾಹ್ಮಣರ ಸಮಕ್ಷ ನನ್ನ ಕೈ ನಿಮ್ಮ ಕೈಯಾಗ ತಗೊಂಡಿರಿ. ಈಗ ಅದೇ ಕೈಯಿಂದ'

ಥರಥರ ನಡುಗುತ್ತ ವತ್ಸಲೆಯು ಸುರಂಗೆಗೆ ಬರೆದ ಆ ಪತ್ರವನ್ನು ರಮಾಕಾಂತನ ಮೈಮೇಲೆ ಒಗೆದಳು.

ರಮಾಕಾಂತನು ಬೆಚ್ಚಿದನು, ಅದೊಂದು ಕ್ಷಣ ಮಾತ್ರ. ಕೂಡಲೆ ಕೋಚಿನ ಮೇಲೆ ಕೂಡುತ್ತ ಅಂದನು 'ಈ ಪತ್ರ ತಗೊಂಡು ನೀ ಏನು ಮಾಡುವವಳು?'

'ಹೌದು, ನಿಜವಾಗಿಯೂ ನಾ ಏನು ಮಾಡುವವಳು?' ಎಂಬ ಪ್ರಶ್ನೆ ವತ್ಸಲೆಗೆ ಬಿದ್ದಿತು. ಆದರೆ ಅವಳು ಪ್ರಸಂಗಾವಧಾನದಿಂದ ಅಂದಳು 'ಹುಡುಗೆಯರ ಶಾಲೆಯಲ್ಲಿ ನೌಕರಿ ಮಾಡುವವರು ನೀವು! ಮತ್ತೆ ಇಂಥ ಪತ್ರ—'

'ಯಾರಿಗೆ ಬೇಕಾಗಿದೆ ಆ ನೌಕರಿ? ತಂದೆಯವರು ಇರುವವರೆಗೆ ಅವರ ಕಣ್ಣೊಳಗೆ ಮಣ್ಣು ಒಗೆಯಲಿಕ್ಕೆ ನೆಟ್ಟಗಿತ್ತು ಅದು. ಈಗ ನಾನು ಕೇವಲ ಕಲೆಯ ಉಪಾಸನೆ ಮಾಡುವವನಿದ್ದೇನೆ'

'ಕಲೆಯದೋ ಸುರಂಗೆಯದೊ?'

'ಇಬ್ಬರದೂ! ಸುರಂಗೆಯ ಸಹವಾಸದಲ್ಲಿ ಎಂಥೆಂಥಾ ಸುಂದರ ಕಲ್ಪನೆ ಹೊಳೆಯುವವು. ಆದರೆ ನಿನ್ನ ಮುಖ ನೋಡಿದರೆ—ಕ್ಷಣದಲ್ಲಿ ಉಗಿಯೂ ಸಹಿತ ಬರ್ಫ ಆದೀತು'

'ಹಾಗಾದರೆ ನನ್ನ ಯಾಕೆ ಮಾಡಿಕೊಂಡಿರಿ?'

'ನಾ ಮಾಡಿಕೊಂಡಿಲ್ಲ ನಿನ್ನ ಕೂಡ ಲಗ್ನ. ನನ್ನ ತಂದೆಯವರು—'

'ಆಗ ನೀವು ಚುಕ್ಕು ಚುಕ್ಕು ಬಾಳ ಆಗಿದ್ದಿರಲ್ಲ?'

ರಮಾಕಾಂತನು ಬಾಯಿಂದ ಸಿಳ್ಳುಹಾಕಹತ್ತಿದನು. ಸ್ವಲ್ಪ ಹೊತ್ತಿನ ಮೇಲೆ ವತ್ಸಲೆಗೆ ಅಂದನು 'ನೀ ಅನ್ನುವದಾದರೂ ಏನು?'

'ನನಗೆ ನಿಮ್ಮ ಪ್ರೇಮ ಬೇಕು

'ಭಿಕ್ಷೆ ಬೇಡುವದರಿಂದ ಸಿಗುವದಿಲ್ಲ ಪ್ರೇಮ'

'ಮಾರಲಿಕ್ಕಾದರೂ?'

'ಓಹೋ. ಆದರೆ ಕಸ್ತೂರಿಗಿಂತ ತುಟ್ಟಿಯಾಗಿರತದೆ ಅದು'

ಇರಲಿ. ಅಷ್ಟು ಬೆಲೆ ಕೊಡತೀನಿ ನಾನು?'

'ಮಾಮಾನ ಮನೆಯೊಳಗೆ ಭಕ್ಕರಿ ಬಡಿಯುವದರಲ್ಲಿ ಹೋಯಿತು ನಿನ್ನ ಜನ್ಮ! ಏನಿದೆ ನಿನ್ನ ಹತ್ತಿರ ಕೊಡಲಿಕ್ಕೆ? ಬಾಯೊಳಗಿನ ಬುರುಗು?'

'ಬಾಯಾಗಿನ ಬುರುಗು ಯಾಕೆ ಬೇಕು? ಎದೆಯ ರಕ್ತ ಕೊಡ ತೀನಿ ನಾ!'

'ಅದಕ್ಕೆ ರಕ್ತ ಸೇರುವದಿಲ್ಲ! ಪ್ರೇಮ ಅಂದರೆ ಹುಲಿಯೇನು ಅಲ್ಲ! ಅದಕ್ಕೆ ಸೌಂದರ್ಯ ಬೇಕು'

ಸೌಂದರ್ಯ! ಎದುರಿನ ಕನ್ನಡಿಯಲ್ಲಿ ತನ್ನ ಪ್ರತಿಬಿಂಬದ ಕಡೆಗೆ ರಮಾಕಾಂತನು ನೋಡುತ್ತಿರುವನೆಂಬುದು ವತ್ಸಲೆಯ ಲಕ್ಷ್ಯಕ್ಕೆ ಬಂದಿತು. ಆ ಕನ್ನಡಿಯ ಎರಡೂ ಬದಿಗೆ ಇಬ್ಬರು ಸುಂದರ ನಟಿಯರ ಮೋಹಕವಾದ ಚಿತ್ರಗಳಿದ್ದವು. ಆ ಚಿತ್ರಗಳ ನಡುವೆ ತನ್ನ ತೀರ ಸಾಮಾನ್ಯ ಚಿತ್ರವನ್ನು ನೋಡಿ ಅವಳು ಮೋರೆ ತಿರುವಿದಳು.

ರಮಾಕಾಂತನು ವಿಕಟವಾಗಿ ನಕ್ಕನು. ನಗೆಯ ದನಿ ಎಂಥದು? ಕರಗಸದ ಹಲ್ಲೇ ಅದು. ಕರ್‌ಕರ್ರೆಂದು ಸಪ್ಪಳ ಮಾಡುತ್ತ ವತ್ಸಲೆಯ ಹೃದಯವನ್ನು ಕೊರೆಯುತ್ತ ಅದು ಗಾಳಿಯಲ್ಲಿ ಬೆರೆತುಹೋಯಿತು.

'ಇಂದು ನಿನಗೆ ಈ ಸುರಂಗೆಯ ಬಗ್ಗೆ ಮತ್ಸರ ಹುಟ್ಟಿತು. ನಾಳೆ ಆ ಸುಲೋಚನೆ ಮೇಲಿಂದ ಮೇಲೆ ನನ್ನ ಕಡೆ ಬರಹತ್ತಿದಳೆಂದರೆ—'

ವತ್ಸಲೆಯ ಕಂಬನಿ ತುಂಬಿದ ಕಣ್ಣುಗಳಲ್ಲಿ ದ್ವೇಷದ ಸೆಳೆಯೊಂದು ಹೊಳೆಯಿತು. ಮಳೆ ಬೀಳುವಾಗ ಚಮಕಿಸಿ ಹೋಗುವ ಹಳದಿ ಕೆಂಪು ಮಿಂಚೇ ಅದು ಏನೊ! ಬಿರುದನಿಯಲ್ಲಿ ಅವಳು ಕೇಳಿದಳು 'ಎಲ್ಲಿಯವಳು ಈ ಸುಲೋಚನಾ?'

'ಎಲ್ಲಿಯವಳೊ ಯಾರಿಗೆ ಗೊತ್ತು? ಆಕೆಯ ವಿಷಯಕ್ಕೆ ಇಷ್ಟೆಲ್ಲ ಚೌಕಸಿಮಾಡಿ ನಾ ಅವಳನ್ನು ಮದುವೆಯಾಗುವದು ಅಷ್ಟರಲ್ಲೇ ಇದೆ'

'ಅಂದರೆ ಲಗ್ನ ಇಲ್ಲದೇನೆ—'

ರಮಾಕಾಂತನು ಉಪಹಾಸದ ನಗೆ ನಕ್ಕು ಅಂದನು 'ಹುಂ! ಮತ್ತೇನು ಕಾಣಿಸಬೇಕು ನಿನಗೆ? ಆದರೆ ನನ್ನ ಮನಸ್ಸು ಎಷ್ಟು ಗಟ್ಟಿ ಇದೆ ಎಂಬುದನ್ನು ನಿನಗೆ ಹೇಳಿ ಏನು ಉಪಯೋಗ? ನೀನು ಮದುವೆಯ ಹೆಂಡತಿ! ಒಂದು ದಿವಸವಾದರೂ ಚೇಷ್ಟೆಗಾಗಿ ನಿನ್ನ ಗಲ್ಲಕ್ಕೆ ಕೈ ಹಚ್ಚಿರುವೆನೇ ನಾನು?'

'ನಾನಂತೂ ಹೇಳಿಕೇಳಿ ಕುರೂಪಿ. ಆದರೆ ಆ ರಂಭೆಯ ಮುಂದೆ–'

'ಇದೀ ಜನ್ಮದಲ್ಲಿ ಇಷ್ಟೊಂದು ಸತ್ಯ ಮಾತಾಡಿದಿ ನೋಡು. ರಂಭೆ ಇರುವಳು ರಂಭೆ ಸುಲೋಚನೆ ಅಂದರೆ. ನೀನು ಅವಳನ್ನು ನೋಡಿದಿ ಎಂದರೆ ಹುಚ್ಚು ಹಿಡಿದು ಹೋಗುವಿ. ಬ್ರಹ್ಮನು ಸ್ಫೂರ್ತಿಯಿಂದ ಮಾಡಿರುವನು ಅವಳ ಮೂರ್ತಿಯನ್ನು'

'ನಿಮಗೆಲ್ಲಿ ಭೆಟ್ಟಿ ಆದಳು ಅವಳು?'

'ಒಕ್ಕಲ' ವಾರಪತ್ರಿಕೆಯ ಕಚೇರಿಯಲ್ಲಿ. ನನ್ನ ಕಥೆಗಳಲ್ಲಿಯ ಚಿತ್ರಗಳನ್ನು ಅವಳೇ ತೆಗೆಯುತ್ತಿರುವಳು'

ರಮಾಕಾಂತನು ಮುಂಗೈ ಮೇಲಿನ ಬಂಗಾರದ ಗಡಿಯಾರದ ಕಡೆ ನೋಡಿದನು. ಎಂಟು ಹೊಡೆಯಲು ಬಂದಿತ್ತು. ಕನ್ನಡಿಯ ಮುಂದೆ ನಿಂತು ತಿದ್ದಿ ತೀಡಿದ ಕ್ರಾಪಿನ ಮೇಲೆ ಟೊಪ್ಪಿಗೆಯನ್ನು ಇಡಹತ್ತಿದನು.

ವತ್ಸಲೆಯು ಬಾಗಿಲಲ್ಲಿ ಹೋಗಿ ನಿಂತಳು. ಕೆಳದುಟಿಯ ಮೇಲೆ ಹಲ್ಲು ಕಚ್ಚಿ ಬಿಗುವಿನಿಂದ ಅಂದಳು 'ನಾ ನಿಮಗೆ ಹೋಗಗೊಡುವದಿಲ್ಲ'

'ಯಾರು ನೀ?'

'ನಿಮ್ಮ ಧರ್ಮಪತ್ನಿ'

'ಅಂದರೆ ಕಾಲೊಳಗಿನ ಬೇಡಿ'

'ಬೇಡಿಹಾಕಿದ ಕೈದಿಯನ್ನು ತುರಂಗದ ಹೊರಗೆ ಹೋಗಗೊಡುವದಿಲ್ಲ'

'ನೀನೇ ಒಪ್ಪಿಕೊಂಡಿ ಆಯ್ತು! ಮನೆಯೆಂದರೆ ತುರಂಗ! ಆದರೆ ಲಕ್ಷ್ಯದಲ್ಲಿಡು. ಇದೇ ತುರಂಗದಲ್ಲಿ ನೀನು ಆಜನ್ಮ ಕೊಳೆಯಬೇಕಾದೀತು'

'ಅದು ಯಾಕೆಂದು?'

'ನೀ ಹೆಂಗಸೆಂದು—ನಾನು—ನಾನು ಗಂಡಸು. ನನ್ನದೇನು? ಒಂದು ಕ್ಷಣದಲ್ಲಿ ಈ ಬೇಡಿಯನ್ನು ಮುರಿಯಬಲ್ಲೆ—' ಕೋಟು ಹಾಕಿಕೊಳ್ಳುತ್ತಲೇ ರಮಾಕಾಂತನು ಬೇಡಿಯನ್ನು ಮುರಿದೊಗೆಯುವೆನೆಂದು ಮಾಡಿದ ಅಭಿನಯ ನೋಡಿ ವತ್ಸಲೆಯ ಹೃದಯದಲ್ಲಿ ಅಂಜಿಕೆ ತುಂಬಿತು.

'ಆದರೆ—ಆದರೆ—ನಾನು ಅಂಥಾದ್ದು ಮಾಡಿದ್ದಾದರೂ ಏನು?'

'ನೀ ಏನು ಮಾಡಿದ್ದೀಯೋ ಕೇಳು ಈ ಕನ್ನಡಿಗೆ. ನಿನ್ನೆಲ್ಲ ಪಾಪದ ಯಾದಿಯನ್ನು ಅದು ಓದಿ ಹೇಳುವುದು. ಸುರಂಗೆಯ ಗಾಯನ, ಸುಲೋಚನೆಯ ಚಿತ್ರಕಲೆ–ಒಂದಾದರೂ ಗುಣವಿರುವದೇನು ನಿನ್ನಲ್ಲಿ?'

'ಏನು ಮಾಡಲಿ? ದೇವಾ, ಏನು ಮಾಡಲಿ ನಾ?' ಗದ್ಗದದಿಂದ ವತ್ಸಲೆಯು ಉದ್ಗಾರ ತೆಗೆದಳು.

ರಮಾಕಾಂತನು ಮೇಜಿನ ಡ್ರಾಅರದಿಂದ ಒಂದು ವಹಿಯನ್ನು ಹೊರತೆಗೆದು ಅದರ ಒಂದು ಪಾನು ತೆರದು ವತ್ಸಲೆಯ ಕೈಯಲ್ಲಿ ಕೊಟ್ಟನು. ವತ್ಸಲೆಯು ಓದತೊಡಗಿದಳು.

'ಲಗ್ನವಾದ ಮೇಲೆ ಸ್ವಲ್ಪ ದಿವಸಗಳಲ್ಲಿಯೇ ವತ್ಸಲೆಯನ್ನು ಸಮೀಪದಿಂದ ನೋಡಿದೆ. ಮನಸ್ಸಿಗೆ ದೊಡ್ಡ ಧಕ್ಕೆ ಕೂತಿತು. ನಿಶ್ಚಯ ಮಾಡುವಾಗ ತಂದೆ ಅಂದಿದ್ದರು 'ಹುಡುಗಿ ಸಾದಗಪ್ಪು ಇದೆ' ಎಂದು' ಅವರ ಆಯುಷ್ಯವೆಲ್ಲ ಹೋದದ್ದು ಪೋಲೀಸಖಾತೆಯಲ್ಲಿ. ಅದಕ್ಕೆಂದೇ ಅವರಿಗೆ ಅವಳು ಸಾದಗಪ್ಪಾಗಿ ಕಂಡಿರಬೇಕು. ಅವಳ ಬಣ್ಣ ನೋಡಿ ನನಗೆನಿಸಿತು–ಕೊಂಕಣದ ಕೂಲಿಕಾರ ಹೆಂಗಸರು ಪರೇಳದಲ್ಲಿ ಕಾಣುವ-ರಲ್ಲ–ಅವರಲ್ಲಿ ಅವಳು ಸಹಜವಾಗಿ ಕೂಡಿಹೋಗಬಹುದು.

ಇಂಥ ಹೆಂಡತಿಯ ಕೂಡ ಇಡೀ ಜನ್ಮ ಕಳೆಯುವದೇ? ಅದಕ್ಕಿಂತ ಜೀವಕೊಟ್ಟರೇನು ಕೆಟ್ಟದು? ಕಲೆ ಹಾಗೂ ಸೌಂದರ್ಯ ಇವು ನನ್ನ ಜೀವನ. ಅವುಗಳ ಕೂಡ ಇವಳ ಬದ್ಧವಿರೋಧವು ಕಾಣುತ್ತದೆ. ಗಂಡ ಹೆಂಡಿರ ನಡುವೆ ಎರಡು ಧ್ರುವಗಳ ಅಂತರ!

ಎರಡು ಧ್ರುವಗಳು ಎಂದಾದರೂ ಒಂದಾಗುವವೇ?'

ರಮಾಕಾಂತನನ್ನು ನೋಡಲೆಂದು ವತ್ಸಲೆಯು ಮೋರೆ ಎತ್ತಿದಳು. ಅವನು ಯಾವಾಗಲೋ ಹೊರಟು ಹೋಗಿದ್ದ. ಕೈಯಲ್ಲಿದ್ದ ವಹಿಯ ಮೇಲಿನ ಚಿತ್ರದ ಕಡೆಗೆ ಅವಳ ಲಕ್ಷ್ಯವು ಹರಿಯಿತು. ತೆರೆದ ಕೊರಳು, ಜರಿದು ಹೋಗುವ ಸೆರಗು, ಓರೆ ನೋಟ, ಸುಂದರ ಮುಖ–ಇವನ್ನೂ ತನಗೆ ತೋರಿಸಿ ಆ ಚಿತ್ರದಲ್ಲಿಯ ತರುಣಿ ಅನ್ನುತ್ತಿದ್ದಳೇನೊ, 'ನನ್ನ ಹಾಗೂ ನಿನ್ನ ನಡುವೆ ಎರಡು ಧ್ರುವಗಳ ಅಂತರವಿದೆ'

ತನಗಿಂತಲೂ ಈ ನಿರ್ಜೀವ ಚಿತ್ರವು ರಮಾಕಾಂತನಿಗೆ ಹೆಚ್ಚು ಸೇರುತ್ತಿರಬಹುದೆಂಬ ವಿಚಾರವು ಅವಳ ತಲೆಯಲ್ಲಿ ಬಂದಿತು. ಅವಳು ತಿರಸ್ಕಾರದಿಂದ ಆ ಅಂಟಿಸಿದ ಚಿತ್ರವನ್ನು ಕಿತ್ತಿ ತೆಗೆದು ಹರಿದು ಚೂರು ಮಾಡಿದಳು. ಆ ಚೂರುಗಳನ್ನು ಕೆಳಗೆ ಒಗೆಯಬೇಕೆಂದು ಗ್ಯಾಲರಿಗೆ ಬಂದಳು.

ವಿದ್ಯುತ್ತಿನ ಝುಗಝುಗದಿಂದ ಶೋಭಿಸುವ ಎದುರಿನ ಮಾಟ ಬಂಗಲೆಯು ಅವಳ ದೃಷ್ಟಿಗೆ ಬಿದ್ದಿತು. ಕಮಲಗಳನ್ನು ಏರಿಸಿದ ಒಂದು ಸುಂದರಮೂರ್ತಿಯಂತೆ ಅದು ಕಾಣುತ್ತಿತ್ತು. ಈ ಥಳಕುಪಳಕಿನ ಕಾರಣವು ಅವಳ ಧ್ಯಾಸಕ್ಕೆ ಬಂದಿತು. ಸಂಜೆಯು ಮುಂದೆ ಚಾಕರಿ ಹುಡುಗನು ಅನ್ನುತ್ತಿದ್ದನು 'ಎದುರಿನ ಬಂಗಲೆಯು ಬಾಯಿಯ ಕಡೆಗೆ ಒಬ್ಬ ಜಹಾಗಿರದಾರರು ಈ ಹೊತ್ತು ಬರುವವರಿದ್ದಾರೆ' ಎಂದು.

ವತ್ಸಲೆಯು ಕಾಗದದ ತುಣುಕುಗಳನ್ನು ಕೆಳಗೆ ತೂರಿದಳು. ಅವು ಗಾಳಿಯ ಮೇಲೆ ತೇಲುತ್ತ ತೇಲುತ್ತ ಕೆಳಗೆ ಹೋದವು. ಅವಳಿಗೆ ತೋರಿತು–ರಮಾಕಾಂತನು ಮಾಡಿದ ತನ್ನ ಅಂತಃಕರಣದ ಚೂರುಗಳನ್ನು ಎಲ್ಲಿ ಒಗೆಯುವದು? ಹೀಗೇ ಗಾಳಿಗುಂಟ?

ಇದುರಿನ ಬಂಗಲೆಯ ಗೋಡೆಗೆ ಹೊಂದಿ ಕಾಲುಹಾದಿಯ ಮೇಲೆ ಒಬ್ಬ ತಿರುಕನು ತನ್ನ ಹಾಸಿಗೆ ಹಾಸುವ ವಿಚಾರದಲ್ಲಿದ್ದನು. ಬಂಗಲೆ ಯಿಂದ 'ನೂಕರಿ ಆ ತಿರಕನ್ನ ಅತ್ತಲಾಗ' ಎಂದು ಯಾರೋ ವಸಕ್ಕನೆ ಕೂಗಿಕೊಂಡರು.

'ದಿನಾ ಇಲ್ಲೇ ಮಲಗತೀನಿ ಎಪ್ಪಾ'

'ಬಹಳ ವಹಿವಾಟೀ ಹಕ್ಕ ಹೇಳತಾನೆ ಮಗ. ನುಗಿಸಿಕೊಡಿರಿ ಅವನ್ನ. ಈ ಹೊತ್ತು ಜಹಾಗಿರದಾರ ಸಾಹೇಬರು ಬರುವವರಿದ್ದಾರೆ! ಇದೆಲ್ಲೀ ಅರಿಷ್ಟ ಬಾಗಿಲದಲ್ಲಿ?' ತಿರುಕನ ಉತ್ತರವೂ ಮುಂದಿನ ಸಂಭಾಷಣವೂ ವತ್ಸಲೆಗೆ ಕೇಳಿಬಂದವೆಂತಲ್ಲ. ಆದರೆ ಮೂಕ ಚಿತ್ರಪಟದಲ್ಲಿಯ ಹಾವಭಾವ ನೋಡಿ ಕಲ್ಪನೆ ಮಾಡಿಕೊಳ್ಳುವಂತೆ ಅವಳ ಮನಸ್ಸಿಗೆ ಆ ಸಂಭಾಷಣೆಯ ಅರ್ಥವಾಯಿತು.

ಆ ಥಾಟುಮಾಟಾಗಿ ಕಾಣುತಿದ್ದ ಬಂಗಲೆಯ ಕಡೆ ನೋಡು ನೋಡುತ್ತ ಆ ತಿರುಕನು ಹೋಗತೊಡಗಿದನು.

ಅವನು ಹೋದ ದಿಕ್ಕಿನ ಕಡೆ ನೋಡುತ್ತಲಿರುವ ವತ್ಸಲೆಯ ಮುಂದೆ ವಿದ್ಯುದ್ದೀಪದ ಬೆಳಕಿನಿಂದ ಕೂಡಿಸಿದ ಅಕ್ಷರಗಳು ಕುಣಿಯ ಹತ್ತಿದವು—'**ಎರಡು ಧ್ರುವ.**'

---

## ೨

## ಅನಾಮಂತ್ರಿತ ಸಮ್ಮೇಲನ

ಮೋಟಾರು ವಾಯುವೇಗದಿಂದ ಹೊರಟಿತ್ತು. ಆದರೆ ರಮಾ ಕಾಂತನಿಗೆ ಆದರ ವೇಗದ ಕಲ್ಪನೆಯಾಗಲಿ, ಅಥವಾ ಅದು ತನ್ನೊಡನೆ ಸ್ಪರ್ಧಿಸುತ್ತಿರುವದೆಂದು ಅದರ ಮೈಗೆ ಅಪ್ಪಳಿಸುವ ಚಳಿಗಾಳಿಯ ಕಲ್ಪನೆ ಯಾಗಲಿ ಇರಲಿಲ್ಲ. ಅದು ಯಾತರದೂ ಅವನಿಗೆ ಅರಿವೇ ಇರಲಿಲ್ಲ. ಗೂಡಿನಲ್ಲಿ ಒಂದರ ಪಕ್ಕದ ಕಾವಿನಲ್ಲೊಂದು ಮಲಗಿದ ಹಕ್ಕಿಯ ಮರಿ ಗಳಿಗೆ ಹೊರಗೆ ತಾಂಡವವಾಡುತ್ತಿರುವ ಬಿರುಗಾಳಿಯ ಅರಿವು ಎಲ್ಲಿ? ಸುರಂಗೆಯ ನಿಕಟವಾದ ನಿಃಸ್ತಬ್ಧವಾದ ಸಹವಾಸದಲ್ಲಿ ಅವನ ಸೌಂದ ರ್ಯಾಸಕ್ತವಾದ ಮನಸ್ಸು ಹೀಗೆಯೆ ತಲ್ಲೀನವಾಗಿ ಹೋಗಿತ್ತು. ನಡು ನಡುವೆ ಒಂದೊಂದು ಹೊರಳಿಕೆಗೆ ಮೋಟರು ನರ್ತಕಿಯಂತೆ ಡೌಲಿನಿಂದ ತಿರುಗುತ್ತಿತ್ತು. ಆಗ ವಿದ್ಯುದ್ದೀಪದ ಬೆಳಕಿನ ಗೆರೆಗಳು ಸುರಂಗೆಯ ಮನೋಹರವಾದ ಕೂದಲಿನ ಮೇಲಿಂದ ಬೆಂಡೋಲೆಯ ಮೇಲೂ, ಬೆಂಡೋಲೆಯಿಂದ ಬಳೆಯ ಮೇಲೂ ಕುಣಿಯುತ್ತ ಕುಣಿಯುತ್ತ ಮಾಯವಾಗುತ್ತಿದ್ದವು. ಆ ಮೋಹಕ ದೃಶ್ಯವು ಕಂಡೊಡನೆ ನಾವೆ ಗಳಲ್ಲಿಯ ದೀಪಿಗೆಗಳ ಬೆಳಕು ನೀರ ಮೇಲೆ ಕುಣಿಯುತ್ತಿದ್ದುದನ್ನು ತಾನು ಚಿಕ್ಕವನಿದ್ದಾಗ ನೋಡಿದ ಸಂಗತಿಯು ರಮಾಕಾಂತನಿಗೆ ನೆನ ಪಾಗುತ್ತಿತ್ತು. ರಾತ್ರಿಯಲ್ಲಿ ಬಂದರಕ್ಕೆ ಹೋಯಿತೆಂದರೆ ಆ ನಾವೆ—

ದೀಪಿಗೆಗಳ ಶೋಭೆಯು ಅವರ್ಣನೀಯವಾಗಿ ತೋರುತ್ತಿತ್ತು. ಸಮುದ್ರದ ಕಪ್ಪು–ನೀಲಿಯ ನೀರ ಮೇಲೆ ಉದ್ಭುದ್ಧಾದ ಬೆಳಕುಗೆರೆಯು ಕುಣಿಯುವದನ್ನು ನೋಡಿ ಅವನ ಬಾಲಹೃದಯವು ಕುಣಿಯುತ್ತಿತ್ತು. ಈ ಹೊತ್ತು ಸುರಂಗೆಯೂ ಅವನಿಗೆ ಸಾಗರದೇವಿಯಂತೆ ತೋರಿದಳು. ಕಪ್ಪು ನೀರತಳದಂತೆ ಕಾಣುವ ಅವಳ ಚೆಂದಾದ ಕೂದಲು, ಆಟಗುಳಿಯಾದ ತೆರೆಗಳಂತೆ ಗಾಳಿಯ ಕೂಡ ಕುಣಿದಾಡುವ ಅವಳ ಮುಂಗುರುಳು, ವಿಹಾರ ನೌಕೆಯಂತೆ ತುರುಬಿನ ಮೇಲೆ ತೊನೆದಾಡುವ ಹೊನ್ನ ಹೂವು–ಸಾಗರಿಕೆಗೂ ಅವಳಿಗೂ ಅಂತರವೇನಿತ್ತು? ಸಾಗರಿಕೆಯು ನಗುತ್ತ ಕೆಲೆಯುತ್ತ ದಂಡೆಗೆ ಕಿವಿ ಹಚ್ಚಿ ಮಾತುಕತೆಯಾಡುವಂತೆ ಅವಳು ನಡುನಡುವೆ ಅವನ ಕೂಡ ಮುದ್ದಾಟದಿಂದ ಮಾತಾಡುತ್ತಿದ್ದಳು. ವತ್ಸಲೆಯ ಸಂಗಡ ಗಳಿಗೆಯ ಹಿಂದೆ ನಡೆದ ತಂಟೆಯು ಅವನಿಗೆ ಆ ಸುಖಸಾಗರದಲ್ಲಿಯ ಕಲ್ಲು ಬಂಡೆಯಂತೆ ಕಂಡಿತು.

'ಮೋಟರು ಗಕ್ಕನೆ ನಿಂತಿತು. ಡ್ರಾಯವ್ಹರನು ಜೋರಿನಿಂದ ಬ್ರೇಕು ಹಚ್ಚಿದನು.

'ಸಾಯಬೇಕಂತೀದೇನಲೆ ಮಗನ? ಕಣ್ಣು ಇಂಗ್ಯಾವೇನ?' ಎಂದು ಡ್ರಾಯವ್ಹರ ಕೂಗಿದ.

ರಮಾಕಾಂತ ಸುರಂಗೆ ಇಬ್ಬರೂ ಹೊರಗೆ ನೋಡತೊಡಗಿದರು. ಒಬ್ಬ ಬುಟ್ಟಿ ಹೊತ್ತ ಹಮಾಲನು ತೂಗಾಡುತ್ತ ಮೋಟಾರಿಗೆ ಅಡ್ಡ ಬಂದಿದ್ದನು.

ರಮಾಕಾಂತನು ನಕ್ಕು 'ಮನೆಯೊಳಗೆ ಮಕ್ಕಳಿಗೆ ಹಾಲು ಕೂಡ ಇರಲಿಕ್ಕಿಲ್ಲ. ಇವ ಮಾತ್ರ ಯಥೇಚ್ಛ ಸೆರೆ ಕುಡೀತಾನೆ' ಅಂದ.

'ನಾ–ನಾನು–ಸೆರೆ ಕುಡೀತೀನಿ. ನೀ–ನೀ–ಮೋ–ಟಾರಿನಾಗ ಕುಂದರತಿ'

ಮೋಟಾರು ಮತ್ತೆ ಮುಂದೆ ನಡೆದದ್ದರಿಂದ ಆ ಸೆರೆಗುಡಕನ ಮಾತು ರಮಾಕಾಂತನಿಗೆ ಅರ್ಧಮರ್ಧ ಕೇಳಿದವು. ಡ್ರಾಯವ್ಹರ ಆಡಿದ 'ಮಗ ಮೃತ್ಯುಪತ್ರ ಬರದಿಟ್ಟ ಬಂದಿದ್ದ ಮನ್ಯಾಗ'

ರಮಾಕಾಂತನು ನಕ್ಕು ಅಂದ 'ಇವ ಎಲ್ಲೀ ಮೃತ್ಯುಪತ್ರ ಮಾಡ ತಾನೆ? ಒಡಕ ಮಡಕಿಗಳದೇ, ಹರಕ ಕೌದಿಗಳದೇ?'

ಬಡವನಿಗೇ ಬಡವನ ಕೈವಾರಿಯಾಗಬೇಕೆಂದು ಅನಿಸುತ್ತದೆ. ರಮಾಕಾಂತನ ಈ ಪ್ರಶ್ನೆಯು ತನಗೆ ಸಮ್ಮತವಿಲ್ಲೆಂದು ತೋರಿಸುತ್ತ ಡ್ರಾಯವ್ಹರ ಅಂದ 'ಬಡವಗೂ ಹೆಂಡರು ಮಕ್ಕಳು ಇರತಾರ ಸಾಹೇಬ್'

'ಇರತಾರೆ ಹೌದು; ಬಡಿಸಿಕೊಳ್ಳಲಿಕ್ಕೆ!' ರಮಾಕಾಂತನು ಉದ್ಗಾರ ತೆಗೆದನು. ಸುರಂಗೆಯು ಮೈ ಮೇಲೆ ಮುಳ್ಳೆದ್ದಂತೆ ಮಾಡಿದ ಹಾಗೆ ಅವನಿಗೆ ಭಾಸವಾಯಿತು.

ಅವನಂದ 'ಬಹಳೇ ತಣ್ಣಗಿನ ಗಾಳಿ ಬಿಟ್ಟಿದೆ ಈ ಹೊತ್ತು'

ಸಹಜವಾಗಿ ಪರಾಜಯವನ್ನು ಒಪ್ಪಿಕೊಳ್ಳುವಷ್ಟು ಡ್ರಾಯ ವ್ಹರನು ಪೆಚ್ಚನಿರಲಿಲ್ಲ. ಹಿಂದೆ ಗೋಣು ಹೊರಳಿಸಿ ಅವನಂದ 'ಸಾಹೇಬ್, ಬಡಮಂದಿ ಹೆಂಡರನ್ನ ಬಡೀತಾರ ಈಟs. ಆದರ ನಿಮ್ಮ ಬಿಳಿ ಅಂಗಿ ಮಂದೀದು ಅಗಸರವ ಘಳಿಗಿ ಹಾಕಿದ ಅರಬೀ ಈಟs ನೋಡಬೇಕು, ಮನಸ ನೋಡಿದರ ಡಾಂಬರಕಿಂತ ಕಪ್ಪು ಇರತೈತಿ'

ಹಿಂದಿನಿಂದ ಮತ್ತೊಂದು ಮೋಟಾರು ಹೆಚ್ಚು ವೇಗದಿಂದ ಬರುತ್ತಿತ್ತು. ಅದಕ್ಕೆ ಎಡೆಗೊಡಲೆಂದು ಡ್ರಾಯವ್ಹರನು ಗಾಲಿಯನ್ನು ಸ್ವಲ್ಪ ತಿರುವಿದ. ಗಾಲಿಯೊಡನೆ ಅವನ ವಿಚಾರಗಳೂ ಹೊರಳಿದವು. ಅವನೆಂದ 'ಸಾಹೇಬ್, ಈ ಕುಡುಕರು ಹೆಂಡರಿಗೆ ಬಡೀತಾರ ಖರೇವು. ಆದರ ಅವರಿಗೆ ಮಾಯಾ-ಮಮತಿ ಏನ ಕಮ್ಮಿ ಇರಾಣಿಲ್ಲ. ಯೋಳೆಂಟು ವರ್ಸದ ಹಿಂದಿನ ಕತಿ, ಆದರೂ ಮತ್ತಮತ್ತ ನೆಪ್ಪಾಗತೈತಿ' ರಮಾಕಾಂತನ ಮೈಯಲ್ಲಿಯ ಕಥಾಲೇಖಕನ ರಕ್ತವು ಕಥೆ ಕೇಳಲಿಕ್ಕೆ ಉತ್ಸುಕವಾಯಿತು. ಅವ ಕೇಳಿದ 'ಮೊದಲು ಎಲ್ಲಿಯವನೋ ನೀನು?'

'ಕೊಂಕಣದವರಿ. ವೆಂಗುರ್ಲೇದ ಕಡ್ಯಾವ, ಸಾಹೇಬ್'

'ಅಲ್ಲೇನು ಮಾಡತಿದ್ದಿ?'

'ಡಮಣಿ ಹೊಡಿಯೋ ಧಂದೆ ಮಾಡತಿದ್ದನರಿ. ಈ ಮೋಟರ ಬಂದು ನಮ್ಮ ಹೊಟ್ಟೆಮ್ಯಾಗ ಕಾಲುಕೊಟ್ಟೈತರಿ. ಒಂದಲ್ಲ ನಾಕೂ ಕಾಲ ಕೊಟ್ಟೈತು, ಸಾಹೇಬ್'

ಅವನ ಆಟಗಾರಿಕೆಯ ವೃತ್ತಿಯನ್ನು ನೋಡಿ ರಮಾಕಾಂತನು ಹಿಗ್ಗಿದನು.

‘ಇಂದಿಗೆ ಯೋಳು ವರ್ಸಾತು ಮೋಟರ ನಡಸತೀನರಿ. ಆದರ ಡಮಣಿ ಮಜಾ ಇಲ್ಲ ಬಿಡರಿ ಈ ಮೋಟರಿನ್ಯಾಗ! ಇಲ್ಲೇನೈತಿ? ಪೆಟ್ರೋಲ ಹಾಕು, ನೀರ ಸುರುವು–ಹ್ಯಾಂಡಲ ತಿರುವು–ಏನ ಯಾರ ಬೆನ್ನ ಥಪ್ಪರಸೋದಿಲ್ಲ, ಯಾರ ಗೋಣ ತುರಸೂದಿಲ್ಲ, ಯಾರಿಗೂ ಹುಲ್ಲಿನ ಪೆಂಡಿ ತಿನಸೂದಿಲ್ಲ’

ಮೋಟಾರಿಗಿಂತ ಎತ್ತಿನ ಬಂಡಿಯು ಹೆಚ್ಚಿನದೆಂದು ತಿಳಿಯುವ ಆ ಹಳ್ಳಿಗಾಡ ಡ್ರಾಯವ್ಹರನನ್ನು ನೋಡಿ ರಮಾಕಾಂತನಿಗೆ ನಗೆ ಬಂದಿತು. ಆದರೆ ಅವನು ನೋಡಿದ–ಸುರಂಗೆಯು ತನ್ನ ಎಡದ ಅಂಗೈಯ ನಡುಬದಿಯಲ್ಲಿ ಗದ್ದವನ್ನೂರಿ ಡ್ರಾಯವ್ಹರನ ಮಾತುಗಳನ್ನು ಉತ್ಸುಕತೆಯಿಂದ ಕೇಳುತ್ತಿದ್ದಳು. ಅವಳ ಅಷ್ಟು ಮೋಹಕವಾದ ಆ ಮೂರ್ತಿಯನ್ನು ಕಣ್ಣುತುಂಬ ನೋಡಬೇಕೆಂದು ರಮಾಕಾಂತನು ಡ್ರಾಯವ್ಹರನ ಗ್ರಾಮ್ಯತನವನ್ನು ಹೊಡೆದುಹಾಕುವ ಯತ್ನವನ್ನು ಸ್ವಲ್ಪವೂ ಮಾಡಲಿಲ್ಲ.

‘ಡಮಣಿ ಅಂದರೆ ಡಮಣೀನರಿ ಸಾಹೇಬ್. ನಮ್ಮ ಅಂಬೋಲಿ ಘಟ್ಟ ದಾಟಾಕ ರಾತ್ರ್ಯಾಗ ಮೋಟಾರಿಗೆ ಪರವಾನಿಗಿಲ್ಲರಿ. ಇದ್ದರ ಮುದ್ದಾಂ ತಗೊಂಡೇನು ಮಾಡೂದೈತಿ? ಇದು ದೆವ್ವಿನಾಂಗ ಥರ್ರಂತ ಘಟ್ಟದಾಗಿಂದ ಹೋಗೂದು! ಆದs ಡಮಣಿ ಇದ್ದಕಾಲಕ್ಕ ರಾತ್ರಿ ಬಂಬತ್ತಕ್ಕ ದಾನೋಲಿಂದ ಗಾಡಿ ಬಿಡೂದ್ರಿ. ಎತ್ತಿನ ಕೊಳ್ಳಾಗಿನ ಗೆಜ್ಜಿ ಗಳಗಳ ಅಳ್ಳಕ್ಕ ಹತ್ತಿದೂ ಅಂದ್ರ ಎಂತ ಗಾಳಿ ತುಂಬಿದಂಗ ಆಗೂದು ಮೈಯ್ಯಾಗ! ದೆವ್ವದ್ದು ಹುಲೀದು ಕಿಂಮತ್ತಿಲ್ಲರಿ! ಒಮ್ಮೆ ಬೆಳಗಾವಿಂದ ವಾಡೀಗೆ ಮಂದೀನ್ನ ಕರಕೊಂತ ಹೋಗಿದ್ದನರಿ. ಬೆಳಗಿನಾಗ ಗಾಡ್ಯಾಗಿನ ಹುಡುಗ ಅವ್ವಗ ಕೇಳತಿದ್ದನರಿ ‘ರಾತ್ರೆಲ್ಲಾ ಲೇಜೀಮ ಯಾರ ಆಡತಿದ್ರs?’ ಅವ್ವ ಹೇಳಿದ್ಲು ಘಟ್ಟದಾಗಿನ ದೆವ್ವಂತ. ಸಾಹೇಬ್, ಆ ಎತಗೋಳ ಲಾಜೀಮ ಹಿಂಗ ನಮುಹತ್ತಿತ್ತರಿ! ಇಲ್ಲದಿದ್ದರ ಈ ಮೋಟಾರಿನ ಪೊಂ–ಪೊಂ’

ಡ್ರಾಯಿವ್ಹರನು ತೀರ ರಂಗಿಗೆ ಬಂದಿದ್ದ. ಮನುಷ್ಯನು ಆವೇಶ ದಿಂದ ಮಾತಾಡುತ್ತಿದ್ದನೆಂದರೆ ಹಾವಭಾವಗಳನ್ನು ಮಾಡುವನು. ಕಾರಣವಿಲ್ಲದೆ ಅವನು ಈ ಹೊತ್ತಿಗೆ ಹಾರ್ನು ಬಾರಿಸಿ ಮೋಟಾರಿನ ಸ್ವರವು ಕರ್ಕಶವೆಂಬ ತನ್ನ ಮಾತಿಗೆ ಪುಷ್ಟಿಯನ್ನು ಕೊಟ್ಟನು. ರಮಾ ಕಾಂತನಿಗೂ ಅವನ ಮಾತು ಮೊದಲಿಗಿಂತ ಹೆಚ್ಚು ಮೋಜೆನಿಸಹತ್ತಿದವು.

'ಇಂದ ಹುಣ್ಣಿವಿ ಅಲ್ಲರಿ ಸಾಹೇಬ್? ಘಟ್ಟದಾಗ ಈ ದಿವಸ ಏನ ಚೆಂದರಿ ಅದು! ಜಾತ್ರ್ಯಾಗ ಸುದ್ದಾ ಸಿಗಾಕಿಲ್ಲ ನೋಡ್ರಾಂದರ. ಇನ್ನು ಸುದ್ದಾ ನನಗದು ಸ್ವಪನದಾಗ ಕಂಡಂಗ ಆಗತೈತಿ—ತೆಲಿಮ್ಯಾಗ ಚಂದಪ್ಪ ಬಂದಾನ, ನೀರ ಬದಿಲೆ ಎತ್ತ ಬಿದಕೊಂಡಾವ, ಗಿಡಗಂಟಿ ಹೊಟ್ಟ್ಯಾಗ ಕಾಲ ಹಕ್ಕೊಂಡ ಮಲಗ್ಯಾವ ಮತ್ತ ಒಬ್ಬ ಗಾಡಿಯವ ಯಾವದೋ ಒಂದು ನಾಟಕದಾಗಿನ ಹಾಡು ಇಂಪ ದನ್ಯಾಗ ಅಂತಾನ.

"ಈ ಚಂದಿರ ಮೇಲೆ ಬಂದರೂ
ಹೇ ಸುಂದರಿ
ಕಾರಿರುಳಿನ್ನೂ ಉಳಿದಿದೆ
ನಿನ್ನ ನೋಟವಲ್ಲದೆ ಯಾರದನು ಕಳೆವರೂ"

ಲಾವಣೀ ಮಟ್ಟದಿಂದ ಹಾಡುವ ಈ ಚರಣವನ್ನು ಡ್ರಾಯಿವ್ಹ ರನು ಸುಮಾರು ಹಾಡಿಯೇ ತೋರಿಸಿಬಿಟ್ಟ. ಅವನ ಆ ವರ್ಣನೆ ಯನ್ನೂ ಗಾಯನವನ್ನೂ ಕೇಳಿ ರಮಾಕಾಂತನಿಗೆ ಕಾವ್ಯವು ಕೆಲವು ಕೋಮಲ ಪ್ರೇಮಕಥೆಗಳನ್ನು ಬರೆಯುವವರ ಜೀವನದಲ್ಲಿಯೇ ಇರದೆ ಗಟ್ಟಿಮುಟ್ಟಾದ ಗಾಡೀ ಹೊಡೆಯುವವರ ಜೀವನದಲ್ಲಿ ಸಹ ಹೊರ ಸೂಸುವದೆಂದು ಅನಿಸಿತು.

ಡ್ರಾಯಿವ್ಹರನ ಹಾಡಿನ ದನಿಯು ಗಾಳಿಯಲ್ಲಿ ಅಡಗಿ ಹೋಯಿತು. ರಮಾಕಾಂತ–ಸುರಂಗೆಯರು ಒಬ್ಬರ ಕಡೆಗೊಬ್ಬರು ನೋಡಿದರು. ಆ ಹವೆಯೊಳಗಿನ ದನಿಯೇ ತಮ್ಮಿಬ್ಬರ ಕಣ್ಣಲ್ಲಿ ಹಾಡುತ್ತಿದ್ದಂತೆ ಅವರಿಗೆ ಭಾಸವಾಯಿತು. ಡ್ರಾಯಿವ್ಹರನು ಸ್ತಬ್ಧವಾಗಿಬಿಟ್ಟನು. ಆದೇನು ತನ್ನ ಘಟ್ಟದ ಮೇಲಿನ ಸವಿ ನೆನಪಿನ ಗುಂಗಿನಲ್ಲಿಯೇ ಅವನಿದ್ದನೊ ಏನೋ.

ಆದರೆ ಅವನ ಕತೆಯನ್ನು ಕೇಳಲು ಉತ್ಸುಕನಾದ ರಮಾಕಾಂತನು ಅವನಿಗೆ ಸುಮ್ಮನೆ ಕೂಡಗೊಡದೆ 'ಹಾಗಾದರೆ ಮೋಟರು ನಿನಗೆ ಸೇರುವದಿಲ್ಲವೆನ್ನಬಾರದೇ ?' ಎಂದು ಕೇಳಿದನು.

'ಹಾಂಗಲ್ಲ ಸಾಹೇಬ್. ಈ ಗಾಡಿ ಅಂದ್ರ ನನ್ನ ಮಗಳಿದ್ಹಾಂಗ. ಎರಡನೆದವರು ಯಾರಿಗೂ ಕೈ ಹಚ್ಚಿಗೊಡುದುಲ್ಲರಿ. ರಾತ್ರಿ ಇರ್ಲಿ ಅಪರಾತ್ರಿ ಇರ್ಲಿ ಈ ಗಾಡೀಗೆ ಬಾಡಿಗಿ ಬಂದರ ಡ್ರಾಯವ್ಹರ ನಾನಽರಿ!'

'ಆದರೆ ಎತ್ತಿನ ಬಂಡಿ ಮೋಜೇನು ಇದಕ್ಕೆ—'

'ಹೌದು, ಅದು ಕನೇವ ಐತ್ರಿ ಸಾಹೇಬ್. ಮೋಟರ ಬಿಟ್ಟು ಇಮಾನ ನಡಸರಿ ನೀವು, ಆದರ ಎತ್ತಿನ ಗಾಡಿ ಮಜಾ ಏನು—'

'ಒಂದೇಸವನೆ ಧಕ್ಕೆ ತಿನ್ನೋದೇ ಹೌದಲ್ಲೋ? ರಮಾಕಾಂತನು ನಗುತ್ತ ಪ್ರಶ್ನೆ ಮಾಡಿದ.

'ಎತ್ತಿನ ಗಾಡ್ಯಾಗ ಜೀವ ಇರತೈತಿ ಸಾಹೇಬ್. ಮೋಟಾರ ಏನ್ರಿ ಯಂತ್ರ! ಬರೇ ಹೆಣ!'

ರಮಾಕಾಂತನಿಗೆ ನಗೆ ಬಂದಿತು. ಟಾಲಸ್ಟಾಯ-ಗಾಂಧಿಯವರಂತೆ ಒಬ್ಬ ಯಃಕಶ್ಚಿತ್ ಡ್ರಾಯವ್ಹರನಿಗೆ ಕೂಡ ಯಂತ್ರದ ಬಗ್ಗೆ ತಿರಸ್ಕಾರ ಹುಟ್ಟುವದೆಂದರೆ ಅವನಿಗೆ ಆಶ್ಚರ್ಯವಾಯಿತು. ಎರಡು ತುದಿಗಳು ಜಗತ್ತಿನಲ್ಲಿ ಎಷ್ಟು ವಿಚಿತ್ರ ರೀತಿಯಿಂದ ಒಂದಾಗುವವು!

ರಮಾಕಾಂತನು ಡ್ರಾಯವ್ಹರನನ್ನು ಕೆಣಕಬೇಕೆಂದು ಕೇಳಿದ 'ಬರೀ ಜೀವ ತಗೊಂಡೇನು ಮಾಡುವದು? ಸುಖವಿದ್ದಿಲ್ಲವೆಂದರೆ—'

'ಛೇ ಸಾಹೇಬ್, ಹಂಗ್ಯಾಕಾದೀತರಿ. ಜೀವದ ಮಾತ ಬ್ಯಾರೆ, ಸುಖದ ಮಾತ ಬ್ಯಾರೆ. ನಮ್ಮನಿಯಾಕಿಗೆ ಮೈಲಿ ಎದ್ದಿದ್ದೋರಿ—ಬಾಳ ಕೆಟ್ಟ ಕಾಣಸಾಕ ಹತ್ತಿತರಿ ಮಾರಿ. ಸಾಹೇಬ್, ನಾ ನಮ್ಮೂರ ರಾಮೇಶ್ವರಗ ಹರಕಿ ಹೊತ್ತೆ 'ಮನಿಯಾಕಿಗೆ ನೆಟ್ಟಗಾಗಲಿ ಪರಸಾ ನಿನಗ ಬಾಳೇಘಡಾ ಕೊಡತೀನಿ' ಅಂತ.

'ಎದ್ದಳೇನು ಅವಳು ನೆಟ್ಟಗಾಗಿ?'

'ನಮ್ಮ ರಾಮೇಶ್ವರ ಅಂದ್ರ ಬಾಳ ಜಾಗರತ ದೇವರ್ರಿ! ಆಕಿಗೆ

ನೆಟ್ಟಗಾತರಿ, ರಾಮೇಶ್ವರನ ಪುಣ್ಣೇವದಿಂದ ಎರಡು ಮಕ್ಕಳು ಮರಿಸೂ ಆದುವರಿ ಆಕಿಗೆ. ಸಾಹೇಬ್ ಹಿಂಗ ನಿದ್ದೀ ಕಟ್ಟೊ ಪಾಳಿ ಬಂತ ನೋಡರಿ; ನಾ ಮಕ್ಕಳು ಮರಿ ನೆಪ್ಪು ಮಾಡಿಕೋತೀನರಿ ಆಗ ಒಮ್ಮೆಗೆ ಹೌರಿಗ ಆಕ್ಕೈತಿ ನೋಡರಿ'

ರಮಾಕಾಂತನ ಕಣ್ಣೆದಿರಿಗೆ ವತ್ಸಲೆಯ ದೀನ ಮೂರ್ತಿಯು ನಿಂತಿತು. 'ನನಗೆ ನಿಮ್ಮ ಪ್ರೇಮ ಬೇಕು' ಈ ಅವಳ ಶಬ್ದಗಳು ಅವನ ಕಿವಿಯಲ್ಲಿ ಕಟ್ಟಿದವು. ಅವನಿಗೆ ಒಂದು ಕ್ಷಣಮಾತ್ರ—ಅರ್ಧ ಕ್ಷಣವಾದರೂ ಆದೀತು—ಅನಿಸಿತು, ಡ್ರಾಯವ್ಹರನಿಗೆ ಮೋಟರು ತಿರುವಲಿಕ್ಕೆ ಹೇಳಿ, ಲಗುಬಗೆಯಿಂದ ಮನೆಗೆ ಹೋಗಿ ವತ್ಸಲೆಗೆ ಅನ್ನಬೇಕು 'ನನ್ನ ಪ್ರೇಮ ಬೇಕಲ್ಲವೇ ನಿನಗೆ? ಇದು ತಗೋ ಹಾಗಾದರೆ'. . . . ಆದರೇನು, ವಿಚಾರದ ಕ್ಷಣಿಕಲಹರಿಯೆಂದರೆ ಹೊನ್ನಿಹುಳದ ಹೊಳಪಿದ್ದಂತೆ. ಅದರಿಂದ ಕತ್ತಲೆಯು ಬೆಳಗುವದರ ಬದಲು ಹೆಚ್ಚು ಭಯಂಕರವೆನಿಸುವ ಸಂಭವವೇ ಬಹಳ! ತಿರುಗಿ ಹೋಗುವ ವಿಚಾರವು ಮನಸ್ಸಿನಲ್ಲಿ ಮೂಡಿತೋ ಇಲ್ಲವೋ ಅಷ್ಟರಲ್ಲಿ ರಮಾಕಾಂತನು ಸುರಂಗೆಯ ಕಡೆಗೆ ನೋಡಿದ. ಬೆಳದಿಂಗಳಲ್ಲಿ ನಸು ಹೊಳೆಯುವ ಅವಳ ಕೂದಲು, ಅರಳಿದ ಸುಗಂಧಿಯಂತೆ ಬರುವ ಅದರ ಸುವಾಸ, ಡ್ರಾಯವ್ಹರನ ಮಾತು ಕೇಳಲಿಕ್ಕೊಂದು ಸ್ವಲ್ಪ ಹೊರಳಿದ್ದರಿಂದ ಹೆಚ್ಚು ಮನೋಹರವಾದ ಅವಳ ಕೊರಳು, ಉಂಗುರದ ನೀಲವಾದ ಹರಳಿನಿಂದ ಎದ್ದು ಕಾಣುವ ಅವಳ ಕೈಯ ಬಿಳಿ ಬಣ್ಣ, ಸುಲೋಚನೆಯಂಥ ಚಿತ್ರಕಾರಳು ಮಾದರಿಗೆಂದು ಹೇಳಿ ಕೂಡಿಸಿದಂತೆ ತೋರುವ ಅವಳ ಮೋಹಕವಾದ ಕುಳಿತ ಮಾಟ, ಇವೆಲ್ಲವೂ ಆ ವಿಚಾರದ ಬಗ್ಗೆ ತನ್ನ ಕಡೆ ನೋಡಿ ಉಪಹಾಸದಿಂದ ನಗುತ್ತಿರುವಂತೆ ಅವನಿಗೆ ತೋರಿತು.

ಡ್ರಾಯವ್ಹರನು ಮೋಟಾರು ನಿಲ್ಲಿಸಿದ. ರಮಾಕಾಂತ ಸುರಂಗೆಯರ ಕೂಡ ತಾನೂ ಉಸುಬಿನಲ್ಲಿ ಕೂಡಬೇಕೆಂದು ಅವನ ವಿಚಾರವಿದ್ದಿಲ್ಲ. ಅವರಿಬ್ಬರಲ್ಲಿಯ ಸಂಬಂಧವು ಅವನಿಗೆ ಗೊತ್ತಿರಲಿಲ್ಲ, ಗೊತ್ತುಮಾಡಿ ಕೊಳ್ಳುವ ಕಾರಣವೂ ಇರಲಿಲ್ಲ. ಆದರೆ ಬೆಳದಿಂಗಳ ರಾತ್ರಿಯಲ್ಲಿ

ಜುಹೂಕ್ಕೆ ಹೋಗುವ ಇಬ್ಬರು ಮನುಷ್ಯರಿಂದ—ವಿಶೇಷವಾಗಿ ಅವರು ಸ್ತ್ರೀ-ಪುರುಷರಿದ್ದರೆ— ತಾನು ದೂರದಲ್ಲಿ ಕೂಡಬೇಕೆಂದು ತಿಳಿಯುವಷ್ಟು ವ್ಯವಹಾರಜ್ಞಾನವು ಆತನಲ್ಲಿತ್ತು. ಆವನು ದೂರ ಹೋಗುತ್ತಿರುವದನ್ನು ನೋಡಿ ಅವನಿಗೆ ರಮಾಕಾಂತನೆಂದನು 'ಅಲ್ಲೊ, ಆಗಿನ ನಿನ್ನ ಕತೆ ಅಲ್ಲಿಯೇ ಉಳಿಯಿತಲ್ಲ! ಎಂಥ ಬೆಳದಿಂಗಳು ಬಿದ್ದಿದೆ! ಇಂಥ ಬೆಳದಿಂಗಳಲ್ಲಿ ಕುಳಿತು ಹರಟೆಹೊಡೆಯುದಿದ್ದರೆ ಮತ್ತೆ—'

ಮಾತಾಡುತ್ತ ಆಡುತ್ತ ರಮಾಕಾಂತನು ಸಮುದ್ರದ ಕಡೆಗೆ ಮೋರೆಮಾಡಿ ಕುಳಿತುಕೊಂಡ. ಸುರಂಗೆಯೂ ಅವನಿಂದ ಸ್ವಲ್ಪ ಅಂತರದ ಮೇಲೆ ಕುಳಿತಳು. ಡ್ರಾಯಿವ್ಹರನು ತುಸು ದೂರವೇ ಇದ್ದ. ಅವನು ಹೇಳತೊಡಗಿದ—ಕತಿ ಏನ ದೊಡ್ಡದಿಲ್ಲ ಸಾಹೇಬ್. ಅಂದರ ಈ ಕುಡಕ ಮಂದಿಗೆ ಸ್ವಂತ ಮನಸಿನಾಗ ದಯಾ ಮಾಯಾ ಇರತೈತರಿ. ಯೋಳೆಂಟ ವರ್ಷ ಆಗಿದ್ದೀತರಿ ಆ ಮಾತಿಗೆ. ನಾ ಅದಽ ಈ ಧಂದೇದಾಗ ಬಿದ್ದಿದ್ದಿನರಿ. ಕೊಂಕಣದಾಗಿನ ನಾವು ಇಬ್ಬರು ಮೂರು ಮಂದಿ ಒಂದೇ ಕ್ವಾಣ್ಯಾಗ ಇರತಿದ್ದಿವಿ. ಯಾವನೋ ಒಬ್ಬನ ಗೆಳೆಯ ಒಂದಿನ ನಮ್ಮ ಕ್ವಾಣ್ಯಾಗ ಬಂದನರಿ. ಏನಾ ತಿಂದೇನಂದರ ಸುದ್ದಾ ಒಂದು ಪೈ ಇದ್ದಿಲ್ಲ ಆವನ ಹಂತಾಕ. ಮುಗಾ ತನ್ನ ಪಗಾರೆಲ್ಲಾ ಜೂಜಿನಾಗ ಹಾಕ್ಕೊಂಡು ಕೂತಿದ್ದ. ನಡರಾತ್ರಿ ಹೊತ್ತರಿ ಕ್ವಾಣ್ಯಾಗ ಯಾರೋ ಅಳಾಕ ಹತ್ತ್ಯಾರಂತ ಅನಿಸಿ ನಾ ಚಟ್ಟನ ದೀಪಾ ಹಚ್ಚಿದನಿ. ನೋಡತೇನಿ ಬಿಕ್ಕಿಬಿಕ್ಕಿ ಅತಗೋತ ಕುಂತಾನಲಾ ನಮ್ಮ ಗೆಣ್ಯಾ ಹಾಸಿಗಿ ಮ್ಯಾಗ. ನಾ ಸನೇಕ ಹೋಗಿ ಬೆನ್ನಮ್ಯಾಗ ಕೈಯಿಡಾಣ ಆವಗ ಆಗದಿ ಉಕ್ಕಿ ಬಂದುಬಿಟ್ಟಿತರಿ. ಆವ ಅಳಅಳಕೋತ ಅಂದ "ನನ್ನ ತುಳಸಿ ಸ್ವಪನದಾಗ ನನಗ ಕಂಡ್ಲು. ಚಿಂದಿ ಆದ ಸೀರಿ ಉಟಗೊಂಡಿದ್ಲು. ಆಕಿ ಅಂದ್ಲು 'ನೀವೆಲ್ಲಾ ರೊಕ್ಕಾ ಜೂಜಿನಾಗ ಸೆರೇದಾಗ ಹಾಕ್ತೀರಿ. ನನಗ ಮಾನಾ ಮುಚಿಗೋಳಾಕ ಒಂದು ಗಟ್ಟಿ ಸೀರಿ ಸುದ್ದಾ ಇಲ್ಲ. ಹಿಂಗಽ ನಾ ಹೋಗಿ ಕಾಮಾಪುರದ ಕೆರ್ಯಾಗ ಜೀವ ಕೊಡತೀನಿ'"

ರಮಾಕಾಂತನಿಗೆ ಈ ಕತೆಯಲ್ಲಿ ವಿಶೇಷವೇನೂ ಕಾಣಲಿಲ್ಲ.

ಆದರೂ ಡ್ರ್ಯಾಯವ್ಹರನಿಗೆ ಅವ ಕೇಳಿದ ' ಮುಂದೇನು ಮಾಡಿದ ಅವ?

'ಮಾಡತಾನೇನ್ರಿ ? ಒಂದೆಡ್ಡು ತುಡುಗ ಮಾಡಿದಾ ಮುಂಬಯಿ-ದಾಗ–ಸಿಗಬಿದ್ದ. ಸಣ್ಣ ಶಿಕ್ಷಾ ಆತರಿ. ಆದರೂ ಏನ ಆರವು ಬರಲಿಲ್ಲರಿ. ಕಡೀಕ ಕೊಂಕಣದಾಗಿನ ಒಂದು ದೊಡ್ಡ ತುಡುಗಿನಾಗ ಸಿಕ್ಕ, ಯೋಳು ವರ್ಸ ಶಿಕ್ಷಾ ಆತರಿ'

ಸುರಂಗೆಯ ಕಣ್ಣಲ್ಲಿ ನೀರು ಬಂದಂತೆ ರಮಾಕಾಂತನಿಗೆ ಭಾಸ ವಾಯ್ತು. ನಕ್ಕು ಅವನಂದ 'ಎಷ್ಟೊಂದು ಮೆತ್ತಗದು ನಿನ್ನ ಮನಸ್ಸು?'

' ಇಶ್ಶ! ಉಸುಕಿನ ಕಣ ಹೋಯಿತು ಕಣ್ಣಾಗ '

' ಊದಲೇನು ಹಾಗಾದರೆ? '

ಗಾಳಿ ತೀರ ನಿಂತಿತ್ತು. ಇಂಥ ಹೊತ್ತಿನಲ್ಲಿಯೂ ಸುರಂಗೆಯ ಕಣ್ಣಲ್ಲಿ ಉಸುಕಿನ ಕಣವು ಹೋದದ್ದನ್ನು ನೋಡಿ ಡ್ರ್ಯಾಯವ್ಹರನು ಅಲ್ಲಿಂದ ಕಾಲು ಕಿತ್ತಿದ. ಅವನು ದೂರ ಹೋದರೂ ಸುರಂಗೆ ಇನ್ನೂ ಕಣ್ಣು ತಿಕ್ಕುತ್ತಲೆ ಇದ್ದಳು.

'ಮತ್ತೆ ನಡುಗುವಿಯೆಷ್ಟು ಥರಥರ?' ರಮಾಕಾಂತನೆಂದ.

' ಗಾಳಿಯೇ ಬಿಟ್ಟಿದೆ ಹಾಗೆ '

' ನಾಳೆ ಜಡ್ಡುಬಿದ್ದಿಯೆಂದರೆ? '

' ಬಿದ್ದರೇನು ? '

'ನಿಮ್ಮ ಮ್ಯಾನೇಜರನು ನನ್ನ ಹತ್ತಾರು ಪೀಳಿಗೆಯವರನ್ನು ಕಳಿಸಬಹುದಲ್ಲ ಸ್ವರ್ಗಕ್ಕೆ!'

' ಹೌದು! ಆಗಳೆ ನಿಮ್ಮ ಮಾತಿನಲ್ಲಿ ಟಾನಿಕ್ ಎಂದು ಏನು ಬಂದಿತ್ತು!

ರಮಾಕಾಂತನು ನೆನಪುಮಾಡಿಕೊಳ್ಳ ಹತ್ತಿದ. ತಾನು ಕಂಪನಿಯ ಬಿಡಾರಕ್ಕೆ ಹೋದ..ಮ್ಯಾನೇಜರ ಅಂದರು ' ಥಂಡಿಯ ದಿವಸ ಇವು. ಯಾಕೆ ಹೋಗುವಿರಿ ಜುಹೂಕ್ಕೆ? ಅದರಲ್ಲಿ ಸುರಂಗೆಯ ಪ್ರಕೃತಿ ನಾಜೂಕು. ಅವಳು ಇಂದು ಜುಹೂಕ್ಕೆ ಹೋದರೆ ನಾಳೆಗೆ ಆಸ್ಪತ್ರೀನೇ ಕಾಣಬೇಕಾದೀತು' ಅದಕ್ಕೆ ತಾನು ಉತ್ತರ ಕೊಟ್ಟ ' ಡಾಕ್ಟರ ಬಿಲ್ಲು ನಾ ಕೊಡತೀನಿ. ಆಯಿತಿಲ್ಲೊ?'

'ಆದರೆ ನೋಡಿರಿ ಕವಿಗಳೇ ಜನರು ಏನಂದಾರು?'

'ಈಗೇನು ಅಂತಾರೆ?'

'ಏನಂತಾರೆ?'

'ನನ್ನ ಬಾಯಿಂದ ಯಾಕೆ ಸುಮ್ಮನೆ ನುಡಿಸುವಿರಿ? ಸುರಂಗೆಗೆ ಬರುವ ಪತ್ರಗಳು–ಅವುಗಳಲ್ಲಿ ಏನೇನು ಇರುವದೋ ಅದನ್ನು—'

'ಜನರದೇನು? ಅವರು ಯಾವಾಗಲೂ ಕಡ್ಡಿ ಒಯ್ದು ಗುಡ್ಡ ಮಾಡತಾರೆ'

ನಾನು ಅನ್ನುವದಾದರೂ ಅದೇ. ಆದರೆ ಈ ಕಡ್ಡಿಯಿಂದಲೇ ಸುಂದರ ಆಸನಗಳನ್ನು ಮಾಡಲಿಕ್ಕೆ ಬರುವದೆಂದು ಅವರಿಗೆಲ್ಲಿ ಗೊತ್ತಿದೆ?'

ತನ್ನ ಈ ಸುಂದರ ಕೋಟಿಕ್ರಮದಿಂದ ಮ್ಯಾನೇಜರರ ಸಿಟ್ಟು ಅರ್ಧಕ್ಕರ್ಧ ಇಳಿಯಿತು. ನಗನಗುತ್ತ ಅವರಂದರು 'ಲೇಖಕ ಇದ್ದೀರಿ ನೀವು. ನಿಮ್ಮ ಹಾಗೆ ಕೋಟಿಕ್ರಮ ಮಾಡಲಿಕ್ಕೆ ಬರುತ್ತಿದ್ದರೆ ನಾನೂ ನಾಟಕಕಾರನೇ ಆಗಿ ಬಿಡುತ್ತಿದ್ದೆ.'

ಆದರೆ ವಿದ್ಯುದ್ದೀಪದ ಬಟನ್ ಒತ್ತಿ ಚಟ್ಟನೆ ಆರಿಸಿದಂತೆ ಅವರ ನಗೆಯು ಮಾಯವಾಯಿತು. ತನ್ನ ಹತ್ತಿರ ಒಂದು ದನಿಯನ್ನು ಇಳಿಸಿ ಅವರಂದರು—'ಸುರಂಗೆಯು ಹಟವನ್ನೆ ಹಿಡಿದು ಕೂತಿರುವಳು— ಹೋಗಲೇಬೇಕೆಂದು. ಮೇಲೆ ನಿಮಗೂ ವಿರಸ ಆಗಬಹುದು. ಆದರೂ ನಿಮ್ಮ ಹಿತದ ಮಾತೇ ಹೇಳತೀನಿ—'

ಒಂದು ಆಳವಾದ ನೆಲಮನೆಯಿಂದ ಬರುವಂತೆ ಅವರ ಸ್ವರವು ಕೇಳ ಬಂದಿತು.

'ಇಲ್ಲ ನೋಡಿರಿ ಕವಿಗಳೇ, ಇಂಥಾ ಪ್ರೇಮ—'

ತಾನು ಸಿಟ್ಟಿನಿಂದ ಉತ್ತರ ಕೊಟ್ಟನು 'ಪ್ಲೆಟಾನಿಕ್ ಲವ್ಹ ಮತ್ತು—'

ಇಷ್ಟರಲ್ಲಿ ಕೂದಲ ಮೇಲೆ ಮೆಲ್ಲಗೆ ಕೈಯಾಡಿಸುತ್ತ ನೋಡುತ್ತ ಸುರಂಗೆ ಒಳಗೆ ಬಂದಳು. ಹೊರಡುವದಕ್ಕೆ ಸಿದ್ಧಳಾಗಿಯೇ ಅವಳು ಬಂದಿದ್ದಳು. ಅವಳನ್ನು ನೋಡುತ್ತಲೆ ತನ್ನ ಮಾತು ನಡುವೇ ನಿಂತ,

ಹೋದವು. ಮ್ಯಾನೇಜರನಿಗೆ ತನ್ನ ಪ್ರೇಮವು ಪ್ಲೇಟಾನಿಕ್ ಇರುವದೆಂದು ತಾನು ಹೇಳುತ್ತಿರುವಾಗ ಆ ಕೊನೆಯ ವಾಕ್ಯವು ಸುರಂಗೆಯ ಕಿವಿಗೆ ಬಿದ್ದಿರಬೇಕು. ನಿಮ್ಮ ಮಾತಿನಲ್ಲಿ ಅದೆಂಥ ಟಾನಿಕ್ ಬಂದಿತ್ತೆಂದು ಈಗಾಕೆ ಕೇಳಿದಳು. ಪಾಪ ಅವಳಿಗೆ ಪ್ಲೆಟಾನಿಕ್ ಎಂಬ ಶಬ್ದವು ಹೇಗೆ ತಿಳಿಯಬೇಕು?

ವತ್ಸಲೆ ಹಾಗೂ ಸುರಂಗೆ ಇವರ ನಡುವಿನ ಶಿಕ್ಷಣದ ಈ ಅಂತರವು ರಮಾಕಾಂತನಿಗೆ ಮನಸ್ಸಿನೊಳಕ್ಕೆ ತಿಳಿಯದೆ ಇರಲಿಲ್ಲ. ಎಷ್ಟಾದರೂ ಸುರಂಗೆಯೊಬ್ಬ ಅಶಿಕ್ಷಿತ ನಟಿ. ಸುಂದರ ರೂಪದಿಂದಲೂ ಮಧುರ ಕಂಠದಿಂದಲೂ ನಾಟಕದಲ್ಲಿ ಅವಳ ಕೆಲಸವು ನೆಟ್ಟಗಾಗುತ್ತಿರಬಹುದು. ಆದರೆ ಅವಳ ಸಹವಾಸವು ತನಗೆ ಸ್ಫೂರ್ತಿದಾಯಕವಾಗಬಹುದೇ? ಅವಳ ಕಂಪನಿಯು ತನ್ನ ನಾಟಕವನ್ನು ಕೂಡಿಸಲು ತಕ್ಕೊಂಡಿದ್ದರಿಂದ ಅವಳಿಗೂ ತನಗೂ ನಿಕಟಸಂಬಂಧವು ಉಂಟಾಯಿತು. ತನ್ನ ಇಡೀ ಆಯುಷ್ಯದಲ್ಲಿ ಕಲಾವಿದೆಯಾದ ತರುಣಿಯ ಕೂಡ ಸಲಿಗೆಯಿಂದಿರುವ ಸಂಧಿಯೇ ತನಗೆ ದೊರೆತಿರಲಿಲ್ಲ. ಆದ್ದರಿಂದಲೇ ತನ್ನ ಕಲಾಸಕ್ತವಾದ ಮನಸ್ಸು ಅವಳ ನಾದದಲ್ಲಿ ಗುಂಗಾಗಿ ಹೋಗಿರಲಿಕ್ಕಿಲ್ಲವಷ್ಟೆ? ಚಿಕ್ಕಂದಿನಿಂದಲೂ ಕಥೆಕಾದಂಬರಿಗಳಲ್ಲಿ, ನಾಟಕಸಿನೇಮಾಗಳಲ್ಲಿ ಹಾಗೂ ಶಾಲೆ ಕಾಲೇಜುಗಳಲ್ಲಿ ಯಾವ ಮಧುರ ಮೂರ್ತಿಯನ್ನು ಸ್ವಪ್ನದಂತೆ ತಾನು ನೋಡಿದನೊ ಅವುಗಳ ಸಮ್ಮೇಲನವು ಸುರಂಗೆಯಲ್ಲಿ ಆಗುವದು ಶಕ್ಯವಿದೆಯೆ? ಇಲ್ಲವೆ—

ರಮಾಕಾಂತನು ಸುರಂಗೆಯ ಕಡೆ ನೋಡಿದ. ಅವನ ಎಲ್ಲ ಸುಂದರ ಸ್ವಪ್ನಗಳ ಎರಕ ಹೊಯ್ದು ನಿರ್ಮಾಣ ಮಾಡಿದ ಪುತ್ಥಳಿಯಂತೆ ಅವಳು ಕಂಡಳು. ಅವಳನ್ನು ನೋಡಿ ಪ್ರಾಚೀನ ಕವಿಗಳು ಪ್ರಶಾಂತ ಸಮಯದಲ್ಲಿ ಲಕ್ಷ್ಮಿಯೇ ಸಮುದ್ರದಿಂದ ಹೊರ ಬಂದು ಕುಳಿತಿರುವಳೆಂದು ನಿಶ್ಚಯವಾಗಿ ಕಲ್ಪಿಸುತ್ತಿದ್ದರು. ಇದುರಿನ ನೀಲ ಸಮುದ್ರವೂ ಮೇಲಿನ ಬೆಳದಿಂಗಳ ಸಾಗರವೂ ಶಾಂತತೆಯ ಸಮುದ್ರದೊಡನೆ ಸಂಗಮವಾದಂತೆ ಭಾಸವಾಗುತ್ತಿತ್ತು. ಈ ಮೂರೂ ಸಮುದ್ರಗಳ ಮಂಥನ ಮಾಡಿದರೆ

ಯಾವ ಅಮೃತವು ಹೊರಡಬಹುದೆಂದು ಕಲ್ಪಿಕತೆಯಿಂದ ರಮಾಕಾಂತ ನನ್ನು ಕೇಳಿದರೆ ಅವನು ಸುರಂಗೆಯ ಕಡೆಗೆ ಬೊಟ್ಟು ಮಾಡಿ ತೋರಿ ಸುತ್ತಿದ್ದನು. ಸಮುದ್ರದ ಮೇಲಿಂದ ಬರುವ ತಂಪುಗಾಳಿಯ ಸುಳಿಗಳು ಮೈಯಲ್ಲಿ ಮಧುರ ಕಂಪವನ್ನು ಉಂಟುಮಾಡುತ್ತಿದ್ದವು. ಸುರಂಗೆಯ ಲಾವಣ್ಯಲಹರಿಗಳೂ ರಮಾಕಾಂತನ ಮನಸ್ಸಿಗೆ ಅದರಂತೆಯೇ ಮೋಹಕ ವೆನಿಸಿದವು. ಒಂದು ಸುಂದರಚಿತ್ರವನ್ನಾಗಲಿ ಸೃಷ್ಟಿಯಲ್ಲಿಯ ಮಧುರ ದೃಶ್ಯವನ್ನಾಗಲಿ ನೆಟ್ಟ ದೃಷ್ಟಿಯಿಂದ ನೋಡುವಂತೆ ರಮಾಕಾಂತನು ಅವಳನ್ನು ನೋಡುತ್ತಿದ್ದನು. ಸುರಂಗೆಯು ಯಾವದೋ ಒಂದು ವಿಚಾರದಲ್ಲಿ ಮುಳುಗಿ ಹೋಗಿದ್ದರಿಂದ ಇದು ಅವಳ ಲಕ್ಷ್ಯಕ್ಕೆ ಬರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ರಮಾಕಾಂತನೆಂದನು 'ಸುರಂಗೆ, ನಿನ್ನ ವಯಸ್ಸೆಷ್ಟು?' ಸುರಂಗೆಯು ಬೆಚ್ಚಿ ನೋಡಿದಳು. ಅವನ ಆ ಪ್ರಶ್ನೆಯ ಓಘವೇ ಅವಳಿಗೆ ತಿಳಿಯಲಿಲ್ಲ. ಅವಳು ಸಣ್ಣ ದನಿಯಲ್ಲಿ ಉತ್ತರ ಕೊಟ್ಟಳು 'ಊರೊಳಗಿನ ಜಾತ್ರೆಯ ದಿವಸ ನಾನು ಹುಟ್ಟಿದ್ದು. ಈ ಕಾರ್ತಿಕಕ್ಕೆ ಇಪ್ಪತ್ತುನಾಲ್ಕು ತುಂಬಿ ಇಪ್ಪತ್ತೈದು—'

'ಛೇ! ಬಚ್ಚಿಡುತ್ತೀ ನೀನು—'

ಸುರಂಗೆಯ ಹುಬ್ಬು ಸ್ವಲ್ಪ ಕೊಂಕಿದವು. ತನ್ನ ಮೇಲೆ ಸುಳ್ಳು ಆರೋಪ ಮಾಡಿದ್ದಕ್ಕಾಗಿ ರಮಾಕಾಂತನ ಶಾಸನ ಮಾಡಬೇಕೆಂದು ಅವಳು ಸವ್ಯಸಾಚಿಯಂತೆ ಬಿಲ್ಲನ್ನೇ ಸಜ್ಜುಮಾಡುತ್ತಿರುವಳೇನೊ ಎಂಬಂತಿತ್ತು. ಆಕಾಶದಲ್ಲಿ ಕಾಮನಬಿಲ್ಲು ಮೂಡಿದ ಮೇಲೆ ಒಮ್ಮೊಮ್ಮೆ ಎದುರಿಗೆ ಅದರ ಪ್ರತಿಬಿಂಬವು ಮೂಡಿ ಅಷ್ಟೇ ಸುಂದರ ಕಾಣುತ್ತದೆ. ರಮಾಕಾಂತನಿಗೆ ಈಗ ಆ ಶೋಭೆಯು ನೆನಪಾಯಿತು.

'ನಿಜವಾಗಿಯೂ ನೀನು ವಯಸ್ಸನ್ನು ಬಚ್ಚಿಡುತ್ತಿರುವಿ'

'ಆಗಲಿ. ನಾ ಇಪ್ಪತ್ತೈದು ವರ್ಷದ ಮುಪ್ಪಿನ ಮುದುಕಿ ಇದ್ದೀನಿ. ಅಂದರೆ ಆಯಿತೇ?' ಸುರಂಗೆಯು ಸ್ವಲ್ಪ ಸಿಡುಕಿನಿಂದಲೇ ನುಡಿದಳು.

ರಮಾಕಾಂತನು ಖೊಳ್ಳೆಂದು ನಗುತ್ತ ಅಂದನು 'ಕಳವು ಏನು ಒಂದೇ ತರದ್ದು ಇರುವದೆಂದು ಕಾಣುತ್ತದೆ!'

'ನಾ ಒಲ್ಲೆ ತಾಯಿಾ. ನನಗೆ ತಿಳಿಯೋದಿಲ್ಲ ನಿಮ್ಮ ಇಂಥಾ ಮಾತು. ನಾಟಕದೊಳಗೆ ಅವು ನೆಟ್ಟಗೆ ಇರತವೆ. ಮುಂದೇನು ಉತ್ತರ ಕೊಡಬೇಕೆನ್ನುವದು ಪಾಠವಾದರೂ ಇರತದೆ.'

ಸುರಂಗೆಯ ಈ ಅಣಕವು ರಮಾಕಾಂತನಿಗೆ ಮಾರ್ಮಿಕವೆನಿಸಿತು. ಅವನೆಂದ 'ನಿನಗೆ ಇಪ್ಪತ್ತೈದನೆಯ ವರ್ಷದಲ್ಲಿ ಬಿದ್ದಿತೇ ಈಗ? ಇದನ್ನು ಕೇಳಿ ಮ್ಯಾನೇಜರರು ನಕ್ಕಾರು. ಅವರನ್ನುತ್ತಿದ್ದರು 'ತೀರ ಸಣ್ಣ ಹುಡುಗರಂತೆ ಜುಹೂಕ್ಕೆ ಹೋಗುವೆನೆಂದು ಹಟಹಿಡಿದಿರುವಳು' ಎಂದು.

ಸುರಂಗೆಯು ಒಮ್ಮೆಲೆ ಗಂಭೀರಳಾದಳು. ಸ್ವಲ್ಪ ಹೊತ್ತು ಸಮುದ್ರದ ಕಡೆ ನಿಟ್ಟಿಸಿ ನೋಡಿ ರಮಾಕಾಂತನಿಗೆ ಒಮ್ಮೆಲೆ ಅಂದಳು. 'ಖರೇ ಹೇಳಲೇ?'

'ಹೌದು. ಸರಿಯಾಗಿ ಸಾಕ್ಷಿಗೆ ನಿಂತಂತೆ ಹೇಳು. ಅನ್ನು ದೇವರ ಸಾಕ್ಷಿ ಆಗಿ ಸತ್ಯ ಹೇಳತೀನಿ, ಸುಳ್ಳು ಹೇಳುವದಿಲ್ಲ—'

ಸುರಂಗೆಯನ್ನು ಉಬ್ಬಿಸಬೇಕೆಂದು ರಮಾಕಾಂತನು ಇದನ್ನಾಡಿ ಬಿಟ್ಟನು. ಆದರೆ ಇದರ ಪರಿಣಾಮವು ವಿಪರೀತವಾಯಿತು. ಅವಳು ಎಡಗೈಯ ಮುಷ್ಟಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಬಲಗೈ ಬೆರಳು ಗಳನ್ನು ಅದರ ಮೇಲೆ ಆಡಿಸುತ್ತ ಸ್ತಬ್ಧಳಾಗಿ ಕುಳಿತಳು. ರಮಾಕಾಂತನ ಮನಸ್ಸಿನಲ್ಲಿ ಬಂದಿತು—ದೇವರ ಸಾಕ್ಷಿಯಾಗಿ ಸತ್ಯ ಹೇಳುವದು! ಇರಲಿ, ಸುರಂಗೆಯು ತನ್ನ ಕಳೆದ ಆ ಇಪ್ಪತ್ತೈದು ವರ್ಷಗಳ ಆಯುಷ್ಯ ಕ್ರಮವನ್ನೇ ಇದ್ದಕ್ಕಿದ್ದಂತೆ ಹೇಳಹತ್ತಿದರೆ–ತನ್ನಿಂದ ಅದನ್ನು ಕೇಳುವ ದಾದರೂ ಆದೀತೇ?

ಆದರೆ ಸುರಂಗೆಯು ಸುಖವಾಗಿ ತನ್ನ ಎಡಮುಷ್ಟಿಯ ಮೇಲೆ ಕೈಯಾಡಿಸುವದರಿಂದ ಈ ವಿಚಾರವು ರಮಾಕಾಂತನನ್ನು ಬಹಳ ಹೊತ್ತು ಅಸ್ವಸ್ಥ ಮಾಡಲಿಲ್ಲ.

'ಬಿಚ್ಚುವದಿಲ್ಲೇನು ಆ ಮುಷ್ಟಿಯನ್ನು? ಅವನು ಚೇಷ್ಟೆಯಿಂದ ಕೇಳಿದ.

'ಯಾಕೆ ಬಿಚ್ಚುವದು? ಅದೇನೋ ಅನ್ನುವರಲ್ಲ: ಮುಚ್ಚಿದ ಮುಷ್ಟಿ ಮೂರು ಲಕ್ಷದ್ದು, ತೆರೆದದ್ದೆಲ್ಲಾ ತೆರವು.

ತನ್ನ ಲಗ್ನದಲ್ಲಿ ವತ್ಸಲೆಯು ಬಳಗದ ಕಡೆಯೊಬ್ಬ ಮುದುಕಿಯು ಮದುಮಕ್ಕಳು ಮುಚ್ಚಿಟ್ಟ ಅಡಕೆ ಹುಡುಕುವ ಆಟವನ್ನು ಆಡ ಬೇಕೆಂದು ಚುಚ್ಚಿದ್ದಳು. ಆಗ ರಮಾಕಾಂತನಿಗೆ ಆ ಸೂಚನೆಯು ಆ ಮುದುಕಿಯಷ್ಟೇ ಹಳೇ ತರದ್ದು ಎಂದು ಅನಿಸಿತ್ತು. ಆದರೆ ಸುರಂಗೆಯು ಮುಚ್ಚಿದ ಮುಷ್ಟಿಯನ್ನು ನೋಡುತ್ತಲೆ ಅವನ ಮನಸ್ಸು ಅಂದಿತು— ತನ್ನ ಲಗ್ನದೊಳಗಿನ ಆ ಹಳೇ ಆಟವು ಅಷ್ಟೇನು ಹುಚ್ಚುತನದ್ದಲ್ಲ! ಬೆಳದಿಂಗಳಿನಲ್ಲಿ ಹೊಂಬಾಳೆಯ ಎಳೆಯ ಹಣಿಗೆಯಂತೆ ಕಾಣುವ ಆ ಮುಷ್ಟಿ—ಸುರಂಗೆಯಾದರೂ ಕ್ಷಣಹೊತ್ತು ಅವನಿಗೆ ಬಿಡಗಿಸ ಬಾಳೆಯ ಗಿಡದಂತೇ ಕಂಡಳು. ಹರವಾದ ಬಾಳೆಯ ತೆಳ್ಳನ್ನ ಎಲೆಯಂತೆ ಗಾಳಿ ಯಲ್ಲಿ ಹಾರಾಡುವ ಅವಳ ಸೆರಗು, ತೆಳ್ಳಗಾದರೂ ಹೊಳೆಹೊಳೆಯುವ ಅವಳ ಮೈಕಟ್ಟು—

ಸುರಂಗೆಯು ನಗುತ್ತ ಕೆಲೆಯುತ್ತಲೇ ಇದ್ದರೆ ಅವಳ ಮುಷ್ಟಿ ಯನ್ನು ಬಿಡಿಸುವ ಮೋಹವು ಒಂದು ವೇಳೆ ಅವನಿಗೆ ತಡೆಯದಂತಾಗು ತ್ತಿತ್ತು. ಮೋಟಾರಿನಲ್ಲಿ ಕೂಡುವ ವರೆಗೆ ಸುರಂಗೆಯ ಮೇಲಿನ ತನ್ನ ಪ್ರೀತಿಯು ಪ್ಲೆಟಾನಿಕ್ ಎಂದು ಅವನಿಗೆ ನಿಜವಾಗಿಯೂ ಅನಿಸುತ್ತಿತ್ತು. ಆದರೆ ಮೈಗೆ ಮೈ ಹಚ್ಚಿ ಕುಳಿತು ಮೋಟರಿನಲ್ಲಿ ಮಾಡಿದ ಪ್ರವಾಸ, ಸಮುದ್ರದ ಮೇಲಿನ ಶಾಂತ—ಏಕಾಂತವಾದ ಶರದೃತುವಿನ ಅಚ್ಚ ಬೆಳ್ದಿಂಗಳು—ಬೆಳ್ದಿಂಗಳೆಲ್ಲಿಯದು? ಚಂದ್ರನ ಹೂಜಿಯಿಂದ ನೆಲದಮೇಲೆ ಸುರಿಸುತ್ತಿದ್ದ ಆ ಉನ್ಮಾದಕ ಮದ್ಯ—ಈ ಎಲ್ಲದರ ಸಂಗಮದಿಂದ ಉಂಟಾದ ಮಧುರ ಸ್ವಪ್ನದಲ್ಲಿ ಅವನ ಮನಸ್ಸು ಈಗ ಈಸತೊಡಗಿತ್ತು. ಆದರೆ ಉಳಿದ ಹೊತ್ತಿನಲ್ಲಿ ಪಾತರಗಿತ್ತಿಯಂತೆ ಆಟವಾಡುವ ಸುರಂಗೆಗೆ ಈ ಹೊತ್ತೇ ಯಾಕೆ ಗಾಂಭೀರ್ಯದ ಲಹರಿಯು ಬರುತ್ತಿರಬಹುದೆಂ ಬುದು ಅವನಿಗೆ ತಿಳಿಯದಾಯಿತು. ಬಹಳ ಹೊತ್ತು ಅವಳು ತಣ್ಣಗೆ ಕುಳಿತದ್ದನ್ನು ನೋಡಿ ಅವನೆಂದ 'ಒಂದು ಮಾತ್ರ ತಪ್ಪಿತು ಇವತ್ತು'

'ಏನು?' ಸುರಂಗೆಯು ಬಲಗೈಯ ಕಿರಿಬೆರಳಿನಿಂದ ಉಸುಕಿನಲ್ಲಿ ಗೆರೆಯೆಳೆಯುತ್ತ ಕೇಳಿದಳು.

'ಆ ಸುಲೋಚನೆಯು ಇರಬೇಕಾಗಿತ್ತು ಸಂಗಡ'

'ಯಾರು ಈ ಸುಲೋಚನಾ?'

'ನನ್ನ ಕಥೆಗಳಿಗೆ ಚಿತ್ರ ತೆಗೆದುಕೊಡುವವಳು. ಒಬ್ಬಳಿರುವಳೆಂದು ಹೇಳಲಿಲ್ಲವೇ ಆ ದಿನ?'

'ಅವಳು ಮನುಷ್ಯಳಲ್ಲವೆಂದು ಕಾಣುತ್ತದೆ'

ರಮಾಕಾಂತನಿಗೆನಿಸಿತು—ಹೆಂಗಸರು ವಿಲಕ್ಷಣ ಹೊಟ್ಟೆಕಿಚ್ಚಿನವರೆಂದು.

ಸುರಂಗೆಯು ತಟ್ಟನೆ ಅಂದಳು 'ಪಾಪ ಪುಣ್ಯವಂತಳು ಕಾಣಸ ತಾಳೆ! ಇಲ್ಲದಿದ್ದರೆ ಇವತ್ತು ಇಲ್ಲಿ ಅವಳ ಕೊಲೆ ಆಗಿಬಿಡುತಿತ್ತು!'

'ಅದು ಹೇಗೆ?'

'ಇಬ್ಬರೊಳಗೆ ಮೂರನೆಯವರು ಬಂದರೆ ಅವರ ಕೊಲೆ ಮಾಡುವಂತೆ ಆಗುವದಲ್ಲವೆ? ನನ್ನ ಕೈಗಂಟಿನ ಮಾತು ನಾ ಹೇಳೂದುಲ್ಲ- ಆಂ- ಇದು! ಒಬ್ಬ ಪ್ರಸಿದ್ಧ ಲೇಖಕನ ವಾಕ್ಯ ಅದೆ ಇದು' ಕಡೆಯ ವಾಕ್ಯವನ್ನು ನುಡಿಯುವಾಗ ಸುರಂಗೆಯು ಸೆರಗಿನಿಂದ ಮೋರೆಯನ್ನು ಅರ್ಧ ಮುಚ್ಚಿ ಮನಃಪೂರ್ವಕವಾಗಿ ನಕ್ಕಳು. ತಿಳಿ ಮೋಡಗಳ ಹಿಂದಿನ ಬೆಳ್ದಿಂಗಳಂತೆ ಅವಳ ನಗೆಯು ರಮಾಕಾಂತನಿಗೆ ತೋರಿತು.

ಅವನೆಂದ: 'ನನ್ನದೇನೂ ಕೆಲಸವಿರಲಿಲ್ಲ ಇವತ್ತು ಇಲ್ಲಿ'

'ಅಂದರೆ ನಾನು ಇಷ್ಟು ಹಟ ತೊಟ್ಟು ಬಂದದ್ದು ಯಾರ ದೆಸೆಯಿಂದ?'

'ಸುಲೋಚನೆಯ ದೆಸೆಯಿಂದ'

'ಅವಳ ಮೋರೆ ಸಹಿತ ನೋಡಿಲ್ಲ ನಾ ಇನ್ನೂ'

'ಬಂದಾಗಿನಿಂದ ನೋಡತೀನಿ. ಸುಮ್ಮನೆ ಚಿತ್ರದಂತೆ ಕುಳಿತು ಬಿಟ್ಟಿರುವಿ. ಆದರಿಂದ ನನಗೇನು ಉಪಯೋಗ? ಸುಲೋಚನೆಗಾದರೆ ಒಂದು ಒಳ್ಳೇ ಮಾಡೆಲ್ ಆದರೂ ಸಿಗುತ್ತಿತ್ತು'

'ಅವ್ವಯ್ಯ, ಯಾರೋ ಇತ್ತಲಾಗ ಬರುವಂತೆ ಕಾಣತದೆ'

ಕುಳಿತ ಸ್ಥಳದಿಂದ ಏಳುತ್ತೇಳುತ್ತ ಸುರಂಗೆಯೆಂದಳು.

ಆಕೆಯನ್ನು ಕೆಣಕುವ ದೃಷ್ಟಿಯಿಂದ ರಮಾಕಾಂತನೆಂದ:

'ಸುಲೋಚನೆಯೇ ಬರುತ್ತಿರಬೇಕು—ನಿನ್ನ ಚಿತ್ರ ಬರಿಯಲಿಕ್ಕೆಂದು'

ಸಮಿಸಮೀಪಕ್ಕೆ ಬಂದಂತೆ ಆ ವ್ಯಕ್ತಿಗಳು ತುಸು ತುಸು ಸ್ಪಷ್ಟ ಕಾಣಹತ್ತಿದವು. ಒಬ್ಬನು ತರುಣ, ಇನ್ನೊಬ್ಬಳು ತರುಣಿ. ತಮ್ಮಂತೆಯೆ ರಸಿಕರು ಭೂಮಿಯ ಮೇಲೆ ಇರುವರೆಂದು ನೋಡಿ ರಮಾಕಾಂತನಿಗೆ ಆನಂದವಂತೂ ಆಯಿತು. ಅವರಿಬ್ಬರಲ್ಲಿ ತರುಣಿಯು ಬೇರೆ ಯಾರೂ ಇರದೆ ಸುಲೋಚನೆಯೇ ಇರುವಳೆಂದು ಕಂಡೊಡನೆ ಅವನ ಆನಂದಕ್ಕೆ ಸೀಮೆಯೇ ಉಳಿಯಲಿಲ್ಲ. ಲೇಖಕರು ಭವಿಷ್ಯವಾದಿಗಳೆಂಬ ತತ್ತ್ವದ ಅನುಭವವು ಅವನ ಆಯುಷ್ಯದಲ್ಲಿ ಇದೇ ಮೊದಲನೆಯ ಸಾರೆ ಬಂದಿತ್ತು. ಅವನನ್ನು ನೋಡಿ ಸುಲೋಚನೆಯೂ ಆಶ್ಚರ್ಯಚಕಿತಳಾದಳು. ಅವಳು ನಗನಗುತ್ತ ಮುಂದೆ ಬಂದು 'ರಮಾಕಾಂತ, ನಿಮಗೆ ಪೂರ್ಣ ನೂರು ವರುಷ ಆಯುಷ್ಯ. ನಾನಿದೇ ಈಗ ವಿದ್ಯಾಧರ ಇವರಿಗೆ ಹೇಳುತ್ತಿದ್ದೆ..'

'ನಾನೂ ನಿಮ್ಮದೇ ನೆನಪು ತೆಗೆದಿದ್ದೆ ಇದೇ ಈಗ. ಸಂಪೂರ್ಣ ನೂರು ವರ್ಷ....'

'ಎಂಥ ಭಯಂಕರ ಶಾಪ ಕೊಡತೀರಿ ನನಗೆ ನೀವು!'

'ಶಾಪ?'

'ಶಾಪವಲ್ಲದೆ ಮತ್ತೇನು? ನೂರು ವರ್ಷ ಆಯುಷ್ಯ! ರಮಾಕಾಂತ, ನಾನು ಚಿತ್ರಕಾರಳೆಂಬುದನ್ನು ನೀವು ಮರೆತೇಬಿಟ್ಟಿರಲ್ಲ!'

ಎಲ್ಲರೂ ಉತ್ಸುಕತೆಯಿಂದ ಸುಲೋಚನೆಯ ಕಡೆ ನೋಡಹತ್ತಿದರು. ಕೈವಸ್ತ್ರದಿಂದ ಕೆಳಗಿನ ನೆಲವನ್ನು ಉಡುಗಿದಂತೆ ಮಾಡಿ ಉಸುಕಿನಲ್ಲಿ ಕೂಡುತ್ತ ಅವಳೆಂದಳು 'ನಾ ಒಲ್ಲೆ ತಾಯಿ ಈ ಮಾರ್ಕಂಡೇಯನ ಆಯುಷ್ಯ. ಕೂದಲೆಲ್ಲ ಹಂಜೀಬುಟ್ಟಿ ಆದ ಅಜ್ಜಿ ನಾ ಎಂದೆಂದೂ ಆಗಲಾರೆ'

ರಮಾಕಾಂತನು ನಗುತ್ತ ಈ ವಾಕ್ಯಕ್ಕೆ ಸ್ವಾಗತ ಮಾಡಿದನು. ಸುರಂಗೆಯು ಕುತೂಹಲದಿಂದ ಸುಲೋಚನೆಯನ್ನು ನೋಡುತ್ತಿದ್ದಳು. ವಿದ್ಯಾಧರನು ಮಾತ್ರ ತೂಕಡಿಸುತ್ತಿದ್ದನೋ ಇಲ್ಲವೆ ಎದುರಿನ ಸಮುದ್ರದ ಕಡೆ ನೋಡುತ್ತಿದ್ದನೋ ಎಂಬುದನ್ನು ಯಾರಿಗೂ ನಿಶ್ಚಯವಾಗಿ ಹೇಳಲಿಕ್ಕೆ ಬರುವಂತಿರಲಿಲ್ಲ.

ಸುಲೋಚನೆಯು ಒಬ್ಬರಿಗೊಬ್ಬರ ಗುರುತು ಮಾಡಿಕೊಡಹತ್ತಿದಳು. 'ಇವರು ವಿದ್ಯಾಧರ! ಗೋಡಂಬಿ ಸುಲಿಯುವ ಯಂತ್ರ ಶೋಧ ಮಾಡುವ ಬಗ್ಗೆ ಜಾಹೀರಾತು ಕೊಟ್ಟಿದ್ದರಲ್ಲ ನಮ್ಮ ದಾದಾ ಅವರು–'

'ಹೌದು' ವಿದ್ಯಾಧರನನ್ನು ದಿಟ್ಟಿಸಿ ನೋಡುತ್ತ ರಮಾಕಾಂತನೆಂದ.

'ಇವರು ಭಾರೀ ಯಂತ್ರಶಾಸ್ತ್ರಜ್ಞರು ಇದ್ದಾರೆ ಅಂ! ಆ ಜಾಹೀರಾತು ಓದಿ ಇವರು ಬಂದರು. ಕೆಲವು ದಿನಗಳಲ್ಲಿಯೇ ಕೊಂಕಣದಲ್ಲಿ ನಮ್ಮ ಕಾರಖಾನೆಗೆ ಹೋಗುವವರಿದ್ದಾರೆ'

'ಇವರ ಅಭಿನಂದನ ಮಾಡುವ ಸುಪ್ರಸಂಗವು ಬೇಗನೆ..'

'ಇವರದಿಷ್ಟೇ ಯಾಕೆ? ನನ್ನದೂ ಸಹ?'

'ನೀವು ಎಂಥ ಯಂತ್ರ ಮಾಡುವವರಿದ್ದೀರಿ ಮತ್ತೆ? ಚಿತ್ರ ತೆಗೆಯುವದೋ ಏನು—'

'ಯಂತ್ರವಲ್ಲ. ನಾನು ಒಂದು ಚೆಂದಾದ ಲಕ್ಷ್ಮಿಯ ಚಿತ್ರ ತೆಗೆಯುವವಳಿದ್ದೇನೆ. ನಮ್ಮ ಗೋಡಂಬಿಯ ಕಾರಖಾನೆಯ ಹತ್ತಿರ ದಾದಾ ಅವರ ಆಫೀಸ ಇರುವದಲ್ಲವೆ? ಅಲ್ಲಿ ಅದನ್ನು ಇಡುವವಳಿದ್ದೇನೆ'

'ಆದರೆ ಇಷ್ಟು ರಾತ್ರಿ ವೇಳೆಯಲ್ಲಿ ನಿಮ್ಮ ಅಬಚಿಯವರು ನಿಮಗೆ ಹೇಗೆ ಹೊರಗೆ ಬರಗೊಟ್ಟರು?'

ರಮಾಕಾಂತನ ಈ ಪ್ರಶ್ನೆಯು ಮೇಲೆ ಕಾಣಲಿಕ್ಕೆ ಸರಳವಾಗಿತ್ತು. ಆದರೆ ಸುಲೋಚನೆ ವಿದ್ಯಾಧರ ಇವರಿಬ್ಬರೂ ಬೆಳ್ದಿಂಗಳಲ್ಲಿ ತಿರುಗಾಡಲಿಕ್ಕೆ ಬಂದದ್ದು ನೋಡಿದಾಗಿನಿಂದ ಈ ಸಂಗತಿಯು ಅವನ ಮನಸ್ಸಿನಲ್ಲಿ ಚುಚ್ಚುತ್ತಿತ್ತು. ಸುರಂಗೆಯಂಥ ನಟಿ ಹಾಗೂ ತನ್ನಂಥ ನಾಟಕಕಾರ!

ಇಂದಿಗೆ ಎರಡು ತಿಂಗಳಿಂದ ದಿವಸದೊಳಗಿನ ಎಂಟು ಹತ್ತು ತಾಸು ತಾವು ಕೂಡಿ ಕಳೆಯುತ್ತಾರೆ! ಆದರೆ ಈ ತಿರುಗಾಡುವ ಯೋಜನೆಗೆ ಆ ಗೋದಲಿಯೊಳಗಿನ ನಾಯಿ ಎಷ್ಟು ಎಡರು ತಂದಳು! ಸುಲೋಚನೆ ನೋಡಿದರೆ ಹಳೇ ಪದ್ಧತಿಯ ಆಬಚಿಯ ಮನೆಯಲ್ಲಿ ಇರುವವಳು! ತನ್ನ ತಂದೆಯ ಜಾಹೀರಾತಿನ ನಿಮಿತ್ತದಿಂದ ಗುರುತಾದ ತರುಣನ ಕೂಡ ಅಪರಾತ್ರಿಯಲ್ಲಿ ಇವಳಿಗೆ ಇವಳ ಆಬಚಿಯು ಹೋಗಗೊಟ್ಟಳಾದರೂ ಹೇಗೆ? ಅಥವಾ ಇವರಿಬ್ಬರ—ರಮಾಕಾಂತನ ಮನಸ್ಸಿಗೆ ಹೊಳೆಯಿತೋ ಇಲ್ಲವೋ ಎನ್ನುವಷ್ಟು ಮತ್ಸರದ ಝುಳುಕು ಹಾಯ್ದುಹೋಯಿತು.

ಸುಲೋಚನೆಯು ನಗನಗುತ್ತ ಹೇಳಹತ್ತಿದಳು. 'ಅದು ಹೌದಲ್ಲೊ ಒಂದು ದೊಡ್ಡ ಮೋಜೇ ಆಯ್ತು. ನಮ್ಮ ಆಬಚಿ ನನಗೆ ಅಪರಾತ್ರಿಯೊಳಗೆ ತಿರುಗಾಡಲಿಕ್ಕೆ ಹೋಗಗೊಡುವವಳು ಮತ್ತು ಅವರು—'

ಅವಳು ವಿದ್ಯಾಧರನ ಕಡೆ ನೋಡಿ ಕಿಡಿಗೇಡಿತನದಿಂದ ನಕ್ಕಳು. ಅವನೂ ಮುಗುಳ್ನಗೆ ನಕ್ಕ. ರಮಾಕಾಂತನಿಗೆನಿಸಿತು—ಇದ್ದಾನೆ,ಗೃಹಸ್ಥ ಜೀವಂತ ಇದ್ದಾನೆ! ವಿದ್ಯಾಧರನು ಬಿಗುವಿನಿಂದ ಅಂದ 'ಆ ಯಂತ್ರದ ನಿಮಿತ್ತದಿಂದ ನಾಲ್ಕು ದಿವಸದ ಹಿಂದೆ ನಮ್ಮ ಗುರುತಾಯ್ತು. ನಾ ಇವರಿಗೆ ಸಹಜ ಕೇಳಿದೆ 'ವಿಮಾನದಲ್ಲಿ ಎಂದಾದರೂ ಕೂತಿದ್ದಿರೇನು?' ಇಲ್ಲ ಎಂದರು ಇವರು. ಇಲ್ಲಿ ಜುಹೂಕ್ಕೆ ನನ್ನ ಒಬ್ಬ ಪಾರ್ಸಿ ಗೆಳೆಯ ಇದ್ದಾನೆ. ಮೊನ್ನೆ ಅವನ ಭೆಟ್ಟಿ ಆಗಲಿಕ್ಕೆಂದು ಬಂದಿದ್ದೆ ಅಲ್ಲಿಂದ—'

ಸುಲೋಚನೆ ನಡುವೇ ಅಂದಳು 'ವಿಮಾನದಿಂದ ಜುಹೂ ನೋಟ ಎಷ್ಟು ಚೆಂದ ಕಾಣುತ್ತದೆ ಎಂದು ಇವರು ಅನ್ನಹತ್ತಿದರು. ನಾನಂದೆ: 'ಇದಕ್ಕಿಂತಲೂ ಚೆಂದವಾದ ನೋಟ ತೋರಿಸತೇನೆ ನಿಮಗೆ' ಅದಕ್ಕೇನೆ ಇವರನ್ನು ಇಲ್ಲಿಗೆ ಕರಕೊಂಡು ಬಂದದ್ದು. ನಿಮ್ಮ ಆ ಕಥೆಯೊಳಗಿನ ಚಿತ್ರ ತೆಗೆಯುವದೂ ಇತ್ತು—'

'ಆದರೆ ಅಬಚಿಯವರು ಹೋಗಗೊಟ್ಟರು ಹೇಗೆ? ಮೊನ್ನೆ ಮೃಚ್ಛ ಕಟಿಕದೊಳಗೆ ಈ ಸುರಂಗೆಯ ಕೆಲಸ ನೋಡಲಿಕ್ಕೆಂದು ನಿಮ್ಮನ್ನು ಕರೆದರೆ ಆಗ ಮಾತ್ರ

'ಇವರೇ ಏನು ಆ ಸುರಂಗಾಬಾಯಿಯವರು?'

ಸುರಂಗೆಯೂ ಸುಲೋಚನೆಯೂ ಒಬ್ಬರನ್ನೊಬ್ಬರು ನಿಟ್ಟಿಸಿ ನೋಡಿದರು. ಮಿಂಚು ಮಿಂಚನ್ನು ಕಂಡಂತೆ ಆಯ್ತು.

'ನಾಟಕಕ್ಕೆ ಸಹ ಹೋಗಗೊಡದ ನಿಮ್ಮ ಅಬಚಿಯವರು—'

'ಆದರೆ ಅಬಚಿಗೆ ಶಹ ಕೊಡಲಿಕ್ಕೆ ಸಿಕ್ಕಿದ್ದರು ಒಬ್ಬರು!'

'ಯಾರವರು?'

'ಬಾಪ್ಪಾ! ನನ್ನ ಮಾವ'

'ರತ್ನಾಗಿರಿಯ ತುರಂಗದಲ್ಲಿ ಇದ್ದರಲ್ಲವೇ ಅವರು?'

'ಹೌದು. ಅಲ್ಲಿಂದ ಬಿಡುಗಡೆ ಆದ ಕೂಡಲೆ ನನ್ನ ಭೆಟ್ಟಿಗೆ ಬಂದರು. ಸ್ವಲ್ಪ ಜಡ್ಡು ಆಗಿದೆ ಅವರಿಗೆ. ಅವರನ್ನು ಮುಂದೆ ಮಾಡಿದೆ—'

'ಈ ಸತ್ಯಾಗ್ರಹೀ ಮಂದಿಗೆ ಬೆಳ್ದಿಂಗಳು ಸೇರತದೇನು?'

ರಮಾಕಾಂತನು ಎಲ್ಲರನ್ನೂ ನಗಿಸಬೇಕೆಂದು ಈ ಪ್ರಶ್ನೆ ಕೇಳಿದ. ಆದರೆ ಸುಲೋಚನೆಯು ಕೂಡಲೆ ರೇಗಿ ಅಂದಳು 'ನಮ್ಮ ಬಾಪ್ಪಾ ಅವರೇನು ಅಷ್ಟು ಅರಸಿಕರಲ್ಲರಿ! ಅವರು ಲಗ್ನ ಮಾಡಿಕೊಳ್ಳದಿದ್ದರೂ ಸಣ್ಣ ಹುಡುಗರು ಅಂದರೆ ಅವರಿಗೆಷ್ಟು ಸೇರಿಕೆ! ಅವರೆಂದೂ ಲೇಖ ಬರೆಯುವದಿಲ್ಲ. ಆದರೆ ಎಷ್ಟು ಓದತಾರೆ ಅವರು! ಬಹಳ ದೊಡ್ಡ ದೊಡ್ಡ ಮಂದೀ ಗುರುತು ಅವರಿಗೆ! ಹಿಂದೆ ಅವರು ಸಾಬರಮತಿ ಆಶ್ರಮ ದಲ್ಲಿ ಇದ್ದರು! ಗಾಂಧಿಯವರ ಸುದ್ದಿ ಅವರೆಷ್ಟು ಮೋಜು ಮಾಡಿ ಹೇಳತಾರಂದಿರಿ?'

'ಬಾಪ್ಪಾ ಎಲ್ಲಿ ಹೋದರು ಅಲ್ಲಿಂದ?' ರಮಾಕಾಂತ ಕೇಳಿದ.

'ನಮ್ಮ ಸಂಗಡವೇ ಮನೆಯಿಂದ ಹೊರಬಿದ್ದರು. ಆದರೆ ಇಂಥಾ ಚಳಿಯಲ್ಲಿ ಬರುವದೆಂದರೆ ಅವರಿಗೆ ಜೀವದ ಸುತ್ತು ಬಂತು. ಇಲ್ಲದಿದ್ದರೆ ಅವರಿಗೆ ಸಮುದ್ರ ಅಂದರೆ ಬೆಳ್ದಿಂಗಳಂದರೆ ಬಹಳ ಬಹಳ ಸೇರುತ್ತದೆ-ಎಲ್ಲಿಯಾದರೂ ಸಿನೇಮಾಕ್ಕೆ ಹೋಗುವೆನೆಂದು ಹೇಳಿ ಹೋದರು'

'ನಿಮ್ಮ ಮೇಲೆ ಅವರ ಪ್ರೇಮವು ಬಹಳೆಂದು ಕಾಣುತ್ತದೆ'

'ತಾಯಿ ತೀರಿಕೊಂಡಾಗ ನಾನು ಬಹಳ ಚಿಕ್ಕವಳಿದ್ದೆ. ಅದರಿಂದ ಅವರದೇ ನನಗೆ ಸಲಿಗೆ ಆಯ್ತು. ಈ ಹೊತ್ತೇ ಮುಂಜಾನೆ ಅವರು ಅನತಿದ್ದರು 'ಸುಲುತಾಯಿ,ನಿನ್ನ ಕೈ ಬಹಳ ಚಲೋ ಎಂದು ಕಾಣಸತದೆ. ಈಗ ಇಂಥಾ ಚಿತ್ರಗಳನ್ನು ತೆಗೆಯಬೇಕಲ್ಲ, ಇಡೀ ಹಿಂದುಸ್ತಾನವೆಲ್ಲ ಅವನ್ನು ತಲೆಯ ಮೇಲೆ ಇಟ್ಟುಕೊಂಡು ಕುಣಿದಿರಬೇಕು. ಮುಂಜಾನೆ ಯಿಂದ ಆ ಲಕ್ಷ್ಮಿಯ ಚಿತ್ರ ಒಂದೇ ಸವನೆ ನನ್ನ ತಲೆಯೊಳಗೆ ಸುಳಿ ದಾಡತದೆ' ವಿದ್ಯಾಧರನು ಬೆಂಬಲಕೊಟ್ಟನು 'ನಿಜವಾಗಿಯೂ ಬಳ್ಳೀ ವಿಲಕ್ಷಣವಾಗಿರುವರು ನಿಮ್ಮ ಮಾಮಾ ಅವರು.'

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು. ಆದರೆ ಸುಲೋಚನೆಗೆ ಅದು ಹೇಗೆ ಹೇಗೊ ಅನಿಸಿತು. ಅವಳೆಂದಳು 'ನಾವೇನು ಎಲ್ಲರೂ ಜಗಳಾಡಿದ್ದೀವೇ? ಸಮುದ್ರದ ಮೇಲೆ ಕುಣಿಯುವ ಬೆಳ್ದಿಂಗಳು ಎಷ್ಟು ಚಂದ ಕಾಣುವದು, ಇಲ್ಲವೇ? ಆದರೆ ಈ ಹೊತ್ತಿನಲ್ಲಿ ಅದರ ಚಿತ್ರವನ್ನು ತೆಗೆಯಲಿಕ್ಕೆ ಬರುವದಿಲ್ಲ ಬೇರೆ!'

'ಮತ್ತು ನನಗೆ ಅದರ ಮೇಲೇನೂ ಕಥೆಯನ್ನು ಬರೆಯಲಿಕ್ಕೆ ಬರುವದಿಲ್ಲ!' ರಮಾಕಾಂತನು ಅವಳೊಡನೆ ತನ್ನ ದನಿಗೂಡಿಸಿದನು.

'ಸಮುದ್ರದ ಕಡೆ ನೋಡಿದರೆ ನನಗೆ ಅನಿಸುವದು—' ವಿದ್ಯಾ ಧರನೆಂದ.

'ಏನು ಅನಿಸುವದು?' ರಮಾಕಾಂತನು ಉತ್ಸಾಹದಿಂದ ಕೇಳಿದ.

'ತೆರೆಗಳ ರೂಪದಿಂದ ಎಷ್ಟು ಶಕ್ತಿಯು ವ್ಯರ್ಥ ಹೋಗುವದಲ್ಲ ಇದು! ಇದರ ಉಪಯೋಗಮಾಡಿಕೊಳ್ಳುವ ಯಂತ್ರವೊಂದನ್ನು ಹುಡುಕಿ ತೆಗೆಯಲು ಬಂದಿತೆಂದರೆ—' ಈ ಪ್ರಾಣಿಯು ಹುಟ್ಟಿದಂದಿನಿಂದ ಕಾವ್ಯದ ಒಂದು ಸಾಲನ್ನಾದರೂ ಓದಿರಬಹುದೇ ಎಂದು ರಮಾಕಾಂತ ನಿಗೆ ಸಂಶಯ ಬಂದಿತು. ಈ ಮನುಷ್ಯನು ಇಷ್ಟೇಕೆ ಸ್ತಬ್ಧನಿರುವನೆಂಬ ಒಗಟು ಈಗ ಅವನಿಗೆ ಬಿಟ್ಟಿತು. ಅವನು ತನ್ನಷ್ಟಕ್ಕೆ ಅಂದ 'ಸುಮ್ಮನೆ ಬಾಯ ಉಸಿರನ್ನು ಹಾಳುಮಾಡುವದರಲ್ಲಿ ಏನು ಅರ್ಥವಿದೆ? ವ್ಯರ್ಥ ಬಡಬಡಿ ಸುವ ಜನರ ಬಾಯೊಳಗಿನ ಉಸಿರಿನ ಸಂಗ್ರಹ ಮಾಡಲಿಕ್ಕೆ ಬರುತ್ತಿದ್ದರೆ

ಆದರ ಜೋರಿನಿಂದ ಎಷ್ಟೋ ಕಾರಖಾನೆ ನಡೆಯಬಹುದು' ಎಂದೇ ಈ ವಿದ್ಯಾಧರನ ಮತವಿರಬೇಕು.

'ಸುರಂಗಾಬಾಯಿಯು ಬರೀ ಶ್ರೋತೃವಿನ ಕೆಲಸ ನಡಿಸಿರುವರು. ಹಾಡುವದರ ಹೊರತು ಬಾಯಿ ತೆರೆಯುವದಿಲ್ಲವೆಂದು ಪಣ–ಗಿಣ ತೊಟ್ಟಿರುವರೇನು ಮತ್ತೆ?'

ರಮಾಕಾಂತನೆಂದ 'ಹೌದು! ಸುರಂಗೆ, ಒಂದು ಪದವನ್ನು ಹೇಳಲ್ಲ.'

ರಮಾಕಾಂತನು ಪರೋಪರಿಯಿಂದ ಆಗ್ರಹ ಮಾಡಿದನು. ಆದರೆ ಏನು ಮಾಡಿದರೂ ಸುರಂಗೆಯು ಹಾಡಲಿಕ್ಕೆ ಒಪ್ಪದಾದಳು. ಈ ಹೊತ್ತೇ ಇವಳ ಮೈಯಲ್ಲಿ ಈ ದೆವ್ವವು ಎಲ್ಲಿಂದ ಹೊಕ್ಕಿತೆಂಬುದು ಅವನಿಗೆ ತಿಳಿಯಲಿಲ್ಲ.

'ನನ್ನ ಮನಸ್ಸೇ ಜಾಗೆಯಲ್ಲಿಲ್ಲ' ಎಂದು ಸುರಂಗೆಯು ಹೇಳುತ್ತಲೇ ಅವನು ಸಿಟ್ಟುಸಿಟ್ಟಿನಿಂದ ಅಂದ 'ನಡೆಯಿರಿ, ಸುಲೋಚನಾ ಬಾಯಿ, ಇವಳ ಮನಸ್ಸು ಹೋಗಲಿ ತನ್ನ ಜಾಗೆಗೆ'

'ಯಾವ ಜಾಗಾ ಅದು?'

'ಕಂಪನಿಯ ಬಿಡಾರ. ಅಲ್ಲಿ ಹೇಗೆ ಭಟ್ಟಂಗಿಯಂತೆ ಇವಳು ಆಡತಾಳೆ! ಆದರೆ ಇಲ್ಲಿ—'

ಸುರಂಗೆ ತುಸು ಕರುಣದೃಷ್ಟಿಯಿಂದ ರಮಾಕಾಂತನನ್ನು ನೋಡಿದಳು. ತಾನು ನಿರ್ದೋಷಿಯೆಂಬುದನ್ನು ಏನು ಮಾಡಿದರೂ ಸಿದ್ಧ ಮಾಡಲಿಕ್ಕೆ ಬಾರದ ಹೊತ್ತಿನಲ್ಲಿ ನಿರಪರಾಧಿಯಾದ ಆರೋಪಿಯ ದೃಷ್ಟಿಯಲ್ಲಿ ತೋರುವ ಹತಾಶೆಯು ಅವಳ ಕಣ್ಣಲ್ಲಿ ತೇಲುತ್ತಿತ್ತು. ಆದರೆ ರಮಾಕಾಂತನು ಅವಳ ಕಡೆ ಲಕ್ಷ್ಯಕೊಡಲೇ ಇಲ್ಲ. 'ಅವ್ವಯ್ಯ. ಬಹಳ ತಡವಾಯ್ತಲ್ಲ! ಬಾಪ್ಪಾ ಅವರು ನಮ್ಮ ಹಾದೀ ನೋಡುತ್ತ ನಿಂತಿರಬಹುದು ಮೂಲೆಯಲ್ಲಿ!' ಎಂದು ಸುಲೋಚನೆಯು ತನ್ನ ಪತ್ತಲದೊಳಗಿನ ಉಸುಕಿನ ಕಣಗಳನ್ನು ಜಾಡಿಸುತ್ತ ಅಂದಳು. ಮೋಟರವ ಬಳಿಗೆ ಬಂದ ಮೇಲೆ ರಮಾಕಾಂತನು ತನ್ನ ಡ್ರಾಯವ್ಹರನಿಗೆ ಅಂದ:

'ಸುರಂಗಾಬಾಯಿಯವರನ್ನು ಅವರ ಬಿಡಾರಕ್ಕೊಯ್ದು ಮುಟ್ಟಿಸು ಮೊದಲು. ಮತ್ತು ಇಕೋ ಈ ಸಾಹೇಬರು–ಇವರನ್ನೂ ಅವರ ಮನೆಗೆ ಮುಟ್ಟಿಸು—'

'ಅಂದರೆ? ನೀವು ಈ ಮೋಟಾರಿನಿಂದ ಬರುವದಿಲ್ಲವೇನು?' ಸುರಂಗೆ ಕೇಳಿದಳು.

'ನಾನು ಸುಲೋಚನಾ ತಾಯಿಯ ಕೂಡ ಹೋಗತೀನಿ'

ಸುರಂಗೆಯು ಪ್ರಷ್ನಮುದ್ರೆಯಿಂದ ರಮಾಕಾಂತನನ್ನು ನೋಡಿದಳು. ವಿದ್ಯಾಧರನಿಗೂ ತನ್ನ ಈ ಹೊಸ ಸುಧಾರಣೆಯು ಸರಿ ಹೋಗಲಿಕ್ಕಿಲ್ಲವೆಂದು ಅವನ ಕಲ್ಪನೆಯಿತ್ತು. ಆದರೆ ಅದು ಸಂಪೂರ್ಣ ತಪ್ಪಿತು. ಸುರಂಗೆಯ ಮೋಟಾರು ಹತ್ತುತ್ತಲೆ ಅವನಂದ: 'ಈ ಮೋಟರೇನು ಆ ಮೋಟರೇನು, ಎರಡೂ ಯಂತ್ರಗಳೇ!'

ರಮಾಕಾಂತನು ಮಾಡಿದ ಈ ಅದಲುಬದಲಿನಿಂದ ಸುಲೋಚನೆಯು ಸ್ವಲ್ಪ ಸಿಟ್ಟಿಗೆದ್ದಳು. ಆದರೆ ವಿದ್ಯಾಧರನು ಹೋಗಿ ಸುರಂಗೆಯ ಮೋಟಾರಿನಲ್ಲಿ ಕುಳಿತುಬಿಟ್ಟದ್ದರಿಂದ ಅವಳಿಗೆ ಏನೂ ಮಾಡಲಿಕ್ಕೆ ಬರದಂತಾಯಿತು. ಮೆಲ್ಲಗೆ ಅವಳಂದಳು 'ಎಕ್ಸಕ್ಯೂಜ–ಅಂ–ವಿದ್ಯಾಧರ' 'ನೆವ್ಹರ ಮಾಯಿಂಡ' ವಿದ್ಯಾಧರನ ಈ ಉದ್ಗಾರವು ಮೋಟಾರಿನ ಸಾರೆಗಮದಲ್ಲಿ ಲುಪ್ತವಾಗಿ ಹೋಯಿತು. ತನ್ನ ಮೋಟರಿನಲ್ಲಿ ಕೂಡುತ್ತಲೆ ಸುಲೋಚನೆ ಕೇಳಿದಳು 'ಚಲೋ ಕಾಣಿಸಿತೇನು ನಿಮಗಿದು?'

'ಕಾಣಿಸಿದಂತೆ ಇರುವದಿಲ್ಲ'

'ಆದರೆ ವಿದ್ಯಾಧರ ಏನು ಅನ್ನಬಹುದು?'

'ಆದರೆ ಯಂತ್ರಕ್ಕೆ ಭಾವನೆಗಳಿರುವವೆಂದು ನಾನು ಇಂದೇ ಕೇಳುತ್ತಿರುವೆ..'

'ಮತ್ತೆ ಆ ಸುರಂಗೆಗೆ ಏನು ಅನಿಸೀತು?'

'ಇದೇನು ಅವಳಿಗೆ ಹೊಸದಲ್ಲ. ಸಾಮಾಜಿಕ ನಾಟಕದಲ್ಲಿ..'

'ಅಂದರೆ ಇದೆಲ್ಲ ನಾಟಕವೇ ಏನೊ?'

'ಹೌದು. ಆದರೆ ರಸವತ್ತಾದ ನಾಟಕವಿದು'

ವಿದ್ಯಾಧರನ ರುಕ್ಷ ಸಹವಾಸದಲ್ಲಿ ಜುಹೂದಲ್ಲಿಯ ಹುಣ್ಣಿಮೆಯು ಸುಲೋಚನೆಗೆ ಅಮಾವಾಸ್ಯೆಯಷ್ಟೇ ಭಯಾನಕವೆನಿಸಿತು. ಕೇವಲ ಅವಳ ಆಗ್ರಹಕ್ಕಾಗಿ ಅವನು ಅವಳ ಕೂಡ ಬಂದಿದ್ದನಷ್ಟೇ. ಆದ್ದರಿಂದ ರಮಾಕಾಂತನು ಮಾಡಿದ ಅದಲು ಬದಲು ಸುಲೋಚನೆಗೂ ಸುಖಕರವೆನಿಸಿತು.

ರಮಾಕಾಂತನ ಮಾತಿಗೆ ಮರುಮಾತನ್ನು ಕೊಡಬೇಕೆಂದು ಅವಳೆಂದಳು: 'ರಸವತ್ತಾದ ನಾಟಕದಲ್ಲಿ ಕೊನೆಗೆ ಲಗ್ನವಾಗುವದೆಂದು ಗೊತ್ತಿರುವದಲ್ಲವೇ?'

'ಇಲ್ಲವೆಂದು ಯಾರು ಹೇಳುವರು?'

'ಮತ್ತೆ ನಾನಂತೂ ಲಗ್ನವನ್ನೇ ಮಾಡಿಕೊಳ್ಳುವವಳಲ್ಲ! ಇವತ್ತೆ ಮುಂಜಾನೆ ಅಬಚಿಯು ಸುದ್ದಿ ತೆಗೆದಿದ್ದಳು. ಆಗ ನಾನು ಉತ್ತರ ಕೊಟ್ಟೆ 'ಬಾಪ್ಪಾನ ಸೋದರಸೊಸೆ ಇದ್ದೀನಿ ನಾ, ಅಬಚಿ'

'ಆದರೆ ಬಾಪ್ಪಾ ಅವರು ದೇಶದ ಸಲುವಾಗಿ ಜೇಲಿಗೆ ಹೋಗುವರಲ್ಲವೇ?'

'ನಾನು ಚಿತ್ರ ಬರೆದು ದೇಶದ ಸೇವೆ ಮಾಡತೀನಿ'

ರಮಾಕಾಂತನಿಗೆ ಅವಳ ಈ ದಿಟ್ಟತನದ ಉತ್ತರದಿಂದ ಸಂತೋಷವಾಯ್ತು. ವತ್ಸಲೆ–ಸುರಂಗೆ–ಸುಲೋಚನೆ ಈ ಮೂವರೂ ಅವನ ಕಣ್ಣೆದುರು ನಿಂತರು. ತನ್ನ ಸೌಂದರ್ಯದೃಷ್ಟಿಗೆ ವತ್ಸಲೆಯು ಬೇಡಾದದ್ದು ಸರಿಯೆಂದು ಅವನಿಗೆನಿಸಿತು. ಸುರಂಗೆಯೊಡನೆ ಕಳೆದ ಎರಡು ತಿಂಗಳು ನಿಕಟ ಸಂಬಂಧವು ಬಂದದ್ದರಿಂದ ಅವಳ ಬಗ್ಗೆ ತನ್ನಲ್ಲಿ ಪ್ರೇಮ ಹುಟ್ಟಿದಂತೆ ಭಾಸವಾದದ್ದು ನಿಜ. ಆದರೆ ಸುರಂಗೆಯು ಕಲಾವಿದಳಾದರೂ ಸುಸಂಸ್ಕೃತಳಲ್ಲ. ರೂಢಿಯಿಂದ ಅವಳು ಉಚ್ಚಕುಲದವರಂತೆ ಮಾತಾಡುತ್ತಾಳೆ. ನಾಟಕವೇ ವ್ಯವಸಾಯವಾದ್ದರಿಂದ ಬಿನಪು ಬಿಯ್ಯಾರಗಳೂ ಅವಳಿಗೆ ನೆಟ್ಟಗೆ ಸಾಧಿಸಿರುತ್ತವೆ. ಆದರೆ ಅವಳ ಶಿಕ್ಷಣವು ಅಕ್ಷರಪೂರ್ತಿಯೆ! ಯಾವ ಹಳ್ಳಿಗಾಡ ಒಕ್ಕಲಿಗನ ಗುಡಿಸಲದಲ್ಲಿ ಅವಳ ಬಾಲ್ಯವು ಹೋಯಿತೋ ಯಾರಿಗೆ ಗೊತ್ತು! ಈ ಹೋಲಿಕೆಯಲ್ಲಿ

ರಮಾಕಾಂತನು ಗುಂಗಾದನು. ಆದರೆ ಸುಲೋಚನೆ ಅವನಿಗೆ ಸುಮ್ಮನೆ ಕೂಡಗೊಡಬೇಕಲ್ಲವೆ? ಅವಳೆಂದಳು: 'ರಸವತ್ತಾದ ನಾಟಕದ ಕಥಾಸ-ಕವು ಕೂಡಲೊಲ್ಲದೆಂದು ಕಾಣುತ್ತದೆ'

'ಕೂಡಲಾರದೇನು? ಆದರೆ ಸ್ವಲ್ಪ ಬೇರೆ ದಾರಿಯಿಂದ'

'ಅದು ಹೇಗೆ?'

'ನಾ ಈ ಮೋಟಾರಿನಲ್ಲಿ ಯಾಕೆ ಕುಳಿತೆ ಗೊತ್ತಿದೆಯೇನು?'

'ನಾನೇನು ಎರಡನೆಯವರ ಮನಸ್ಸು ತಿಳಿಯೋದು ಕಲಿತಿಲ್ಲ'

'ನಿಮ್ಮ ಬಾಪ್ಪಾ ಅವರನ್ನು ನೋಡಬೇಕಾಗಿದೆ ನನಗೆ?

'ಈಗಲೆ?

'ಹೌದು. ಈಗ ನೋಡುವದರಲ್ಲಿಯೇ ಮೋಜಿದೆ. ಬೆಳ್ದಿಂಗಳ ರಾತ್ರಿಯಲ್ಲಿ ಸಮುದ್ರದ ಕಡೆ ಹೋಗಬೇಕೆನ್ನುವ ಸೋದರಸೊಸೆಯ ಹೌಸು ನಡಸಲಿಕ್ಕೆಂದು ಮೈಯಲ್ಲಿ ನೆಟ್ಟಗಿಲ್ಲದಿದ್ದರೂ ಹೊರಬೀಳುವ ಮಾವ..'

ಮೋಟರಿನ ತುತೂರಿಯ ಅಬ್ಬರದಲ್ಲಿ ರಮಾಕಾಂತನ ಮುಂದಿನ ಮಾತು ಸುಲೋಚನೆಗೆ ಕೇಳಿಬರಲಿಲ್ಲ. ಆದರೆ ರಮಾಕಾಂತನ ಕಲ್ಪನಾ ಮಯವಾದ ಉತ್ತರವು ಅವಳಿಗೆ ಮೋಜೆನಿಸಿತು. ಅಲ್ಲದೆ ಅವಳ ಮನಸ್ಸು ಒಳಒಳಗೆ ಪ್ರಸನ್ನಸ್ವರದಿಂದ ಅಂದಿತು: 'ನನ್ನ ಬಾಪ್ಪಾ ಅವರು ಇದ್ದೇ ಇರುವರು ಅಂಥವರು!'

* * * * *

ಸುರಂಗೆಯು ಮೋಟರ ಡ್ರಾಯವ್ಹರನಿಗೆ ಮಾತ್ರ ಹೆಜ್ಜೆಹೆಜ್ಜೆಗೆ ಆಶ್ಚರ್ಯವೆನಿಸುತ್ತಿತ್ತು. ಹಿಂದಿನ ಮಗ್ಗಲು ಮನುಷ್ಯರು ಕುಳಿತಿರುವ ರೆಂದು ಅವನಿಗೆ ಗೊತ್ತಿರದಿದ್ದರೆ ತಾನು ಬರಿದಾದ ಮೋಟರು ಹೊಡೆ-ತ್ತಿರುವೆನೆಂದು ಅವನಿಗೆ ಅನಿಸಬಹುದಾಗಿತ್ತು. ಅವನು ಹೊರಳಿ ನೋಡಿದ. ಸುರಂಗೆ ಚಂದ್ರನನ್ನು ಶೂನ್ಯದೃಷ್ಟಿಯಿಂದ ನೋಡುತ್ತಿದ್ದಳು. ಅವಳ ಕೈಯು ಅವಳ ಪೋಲಕದ ಕಿಸೆಯ ಮೇಲೆ ಅದು ಹೇಗೋ ಆಡುತ್ತಿತ್ತು. ಸುರಂಗೆಯು ಬಿಡಾರಕ್ಕೆ ಬಂದು ಡ್ರಾಯವ್ಹರನ

ಮೋಟಾರು ನಿಲ್ಲಿಸಿದ ಮೇಲೇನೊ ಅವಳಿಗೆ ಎಚ್ಚರವಾಯಿತು. ಉದಾಸ ಮುದ್ರೆಯಿಂದ ಆಕಾಶದಲ್ಲಿ ತನ್ನೊಡನೆ ಓಡಿಬರುತ್ತಿದ್ದ ಚಂದ್ರನಿಗೆ ಅವಳೇನು ಕೇಳುತ್ತಿದ್ದಳೋ ಅವಳಿಗೆ ಗೊತ್ತು! ಡ್ರಾಯವ್ಹರನು ಮೋಟಾರಿನ ಬಾಗಿಲು ತೆರೆದ, ಸುರಂಗೆಯು ಲಗುಬಗೆಯಿಂದ ಇಳಿದಳು. ಮೋಟರು ವಿದ್ಯಾಧರನ ಕೋಣೆಯ ಕಡೆಗೆ ಹೊರಟಿತು. ಈಗಾದರೂ ಒಳಗಿದ್ದ ಸಾಹೇಬರಿಗೆ ಮಾತು ಬರಬಹುದೆಂದು ಡ್ರಾಯವ್ಹರನಿಗೆ ತೋರಿತು. ಅವನಂದ: 'ಜುಹೂಕ ಬೆಳದಿಂಗಳದಾಗ ಬಾಳ ಮಂದಿ ಹೋಕ್ಕಾರ ಸಾಹೇಬ್. ನನಗೇನು ಅದು ಸೇರಾಣಿಲ್ಲ ಜುಹು'

ಅನ್ನಛತ್ರದಲ್ಲಿ ಪುಕ್ಕಟೆ ಉಂಡು ಮೆಣಸು ಪುಡಿಯನ್ನು ಬೇಡುವ ಈ ಡ್ರಾಯವ್ಹರನನ್ನು ಕಂಡು ವಿದ್ಯಾಧರನಿಗೆ ಆಶ್ಚರ್ಯವಾಯಿತು. ಅವನಂದ: 'ಅದೇಕೋ ನಿನಗೆ ಸೇರುವದಿಲ್ಲ?'

'ನಮ್ಮ ಕೊಂಕಣದಾಗಿನ ಗಮ್ಮತ ಐತೇನರಿ ಜುಹೂದಾಗ ಸಾಹೇಬ್'

'ಏನೇನು ಅದೆಯೋ ನಿನ್ನ ಕೊಂಕಣದಲ್ಲಿ?'

'ಮಾವು, ಹಲಸು, ಗೇರು–ಗುಡ್ಡದ ಮ್ಯಾಗ ಗೇರುಗಿಡದ ಸಾಲು ಹಿಂಗ ಹತ್ತಿರತಾವ ಅಂತೀರಿ! ಕ್ವೀನ್ಸರೋಡ ಮ್ಯಾಗಿನ ಸಂಜೀಮುಂದ ನಿಂದರೂ ಮೋಟರ ಸುದ್ದಿ ಏನೂ ಅಲ್ಲರಿ ಅದರ ಮುಂದ'

'ಆದರೆ ಕೊಂಕಣದಲ್ಲಿ ಹಾವು ಬಹಳ ಇರುತ್ತವಂತಲ್ಲ..?'

'ಹೌದು ಸಾಹೇಬ್. ದೇವರಹಂಗs ಅದಾವ್ರಿ ಆ ಕಡಿ. ರಾಮೇಶ್ವರ, ಬ್ರಹ್ಮೇಶ್ವರ, ಪಾತಾಳೇಶ್ವರ, ವೇತಾಳ–ಮತ್ತ ಹಾಂವು ಎಟೀಟ ತರದ್ದೂರಿ. ಮ್ಯುಜಿಂದಾಗ ನೋಡಾಕ ಸಿಗಾಕಿಲ್ಲರಿ. ಒಂದು ಒನಕೀ ಆಟು ದೊಡ್ಡದಿದ್ದರ,ಒಂದು ಕಿರಬಳ್ಳಿನಟು ಸಣ್ಣದು. ಇಸದ ಹಾವಂತೂ'

'ಮತ್ತೆ ದೆವ್ವ..'

'ದೆವ್ವ ಇದ್ದರ ಸಹಿತ ದೇವರ ಮುಂದ ಏನ ನಡೀತೈತಿ ಸಾಹೇಬ್ ಅವುಗಳದು? ನನ್ನ ಹುಡಗಗ್ಗ ಸೆಟವಿ ಬಡಕೊಂಡಿದ್ದಳ್ರಿ. ಕಾಮಾಪುರದ ಕಮಳೇಶ್ವರಗೆ ಹರಕಿ ಹೊತ್ತೆ. ಹುಡುಗ ಹುಶಾರಾದ. ಹೋಳಿ

ಹುಣ್ಣಿವಿಗೆ ಎಂತಾ ಬಾರಿ ಜಾತ್ರಿ ಆಗ್ತೈತಿ ಅಲ್ಲೆ. ಆಯ್ದು ವರ್ಸ ಕ್ಕೊಮ್ಮೆ ಕ್ವಾಣಾ ಕೊಡತಾರ್‍ರಿ ದೇವಿಗೆ!'

'ನಿಲ್ಲಿಸು, ಇಲ್ಲೇ, ನಿಲ್ಲಿಸು' ವಿದ್ಯಾಧರನು ಒಮ್ಮೆಲೆ ಕೂಗಿದನು.

ಮೋಟರಿನ ಬಾಗಿಲನ್ನು ಧಡಕ್ಕೆಂದು ತೆರೆದು ಅವನು ಹೊರ ಬಂದನು. ಡ್ರಾಯವ್ಹರನ ರಾಮರಾಮು ಸ್ವೀಕರಿಸಿ ಅವನು ರಸ್ತೆ ದಾಟಿ ಹೋಗಿದ್ದನೋ ಇಲ್ಲವೋ ಅದೇ ಡ್ರಾಯವ್ಹರನು ಚಪ್ಪಾಳೆ ಬಾರಿಸಿ 'ಸಾಹೇಬ್, ಪತ್ರ ಒಂದು ಉಳದೈತಿ ನಿಂಬದು'

'ನನ್ನದು'?

'ಇದು ನೋಡಿರಿ ಸಾಹೇಬ್'

ಡ್ರಾಯವ್ಹರನು ಓಡುತ್ತಲೇ ಅವನ ಹತ್ತಿರ ಹೋದ. ಪತ್ರವು ತನ್ನದಲ್ಲವೆಂದು ವಿದ್ಯಾಧರನು ಹೇಳುವವನಿದ್ದ. ಆದರೆ ಇಷ್ಟರಲ್ಲಿ ತನ್ನ ಹತ್ತಿರ ರೂಸ್ಸವೃತ್ತಿಯಿಂದ ಕುಳಿತ ಸುರಂಗೆಯು ನೆನಪಾಯಿತು. ಆಗಳೆ ರಮಾಕಾಂತನು ಮಾಡಿದ ಅದಲುಬದಲಿನ ಬಗ್ಗೆ ಮನಸ್ಸಿನೊಳಗೆ ಹುಟ್ಟಿ ಕೊಂಡಿದ್ದ ಸಣ್ಣ ಅಸಮಾಧಾನವು ಆ ಪತ್ರ ನೋಡಿದೊಡನೆ ಅಳಕ ಹತ್ತಿತು. ನೆನಪುಮಾಡಿಕೊಂಡಂತೆ ಮಾಡಿ ಅವನು ಒಮ್ಮೆಲೆ ಅಂದನು: 'ಎಲ, ಹೌದು. ನೆಟ್ಟಗೆ ಮಾಡಿದಿ. ಬಹಳ ಮಹತ್ವದ್ದಿತ್ತು ಆ ಪತ್ರ.'

ಡ್ರಾಯವ್ಹರನು ಹೊರಟುಹೋಗುತ್ತಲೆ ವಿದ್ಯಾಧರನು ಆ ಪತ್ರ ಒಡೆದು ನೋಡಿದನು. ಬೆಳದಿಂಗಳಲ್ಲಿ ಅಕ್ಷರಗಳು ಸ್ವಲ್ಪ ಮಸಕು ಮಸಕಾಗಿ ಕಾಣುತ್ತಿದ್ದವು. ಅವನು ಅದರ ಆರಂಭವನ್ನು ನೋಡಿದ 'ಪ್ರಿಯ ರಮಾಕಾಂತ,' ಕೆಳಗಿನ ಸಹಿಯ ಕಡೆ ಕಣ್ಣು ಹೊರಳಿಸಿದ—

ತಮ್ಮ ಪ್ರೀತಿಯ ಗೆಳತಿ,

—**ಸುರಂಗಾ**'

———

೩

# ಅಗ್ನಿರಸ

ರಮಾಕಾಂತನ ಆ ತ್ರೋಟಕವಾದ ಆತ್ಮವೃತ್ತದ ಪಾನುಗಳನ್ನು ವತ್ಸಲೆಯು ಅದೆಷ್ಟೋ ಹೊತ್ತು ತಿರುವಿಹಾಕಿದಳು. ಸತ್ತ ಮನುಷ್ಯನನ್ನು ನೋಡುವಾಗ ಭೀತಿಯೇನೋ ಅನಿಸುತ್ತದೆ. ಆದರೆ ಉತ್ಸುಕತೆಯು ಮಾತ್ರ ಇಲ್ಲದಾಗುವದಿಲ್ಲ. ಆ ಆತ್ಮವೃತ್ತದಲ್ಲಿಯ ತನ್ನ ಮೃತ ಸಂಸಾರದ ಕಡೆಗೆ ನೋಡುವಾಗ ಅವಳ ಸ್ಥಿತಿಯೂ ಹೀಗೇ ಆಯಿತು. ಎದುರಿಗೆ ಹಿಡಿದ ದೀಪವನ್ನು ದಿಟ್ಟಿಸಿ ನೋಡುತ್ತ ಹಾವು ಸುಮ್ಮನಿರುವಂತೆ ವತ್ಸಲೆಯು ಆ ವಹಿಯ ಕಡೆಗೆ ಎಷ್ಟೋ ಹೊತ್ತಿನವರೆಗೆ ನೋಡುತ್ತ ಕುಳಿತಳು. ಬೀದಿಯಲ್ಲಿಯ ಜನಸಂದಣಿಗೆ ಒಂದ ಭರವು ಯಾವಾಗಲೋ ಸರಿದು ಹೋಗಿತ್ತು. ಸಮುದ್ರಕ್ಕೆ ಉಕ್ಕು ಒಂದು ಇಳಿದು ಹೋದ ಮೇಲೂ ಅದರಿಂದ ತೊಯ್ದ ಉಸುಕಿನ ಭಾಗವು ಸ್ಪಷ್ಟವಾಗಿ ಕಾಣುವಂತೆ ಆ ಸಂದಣಿಯ ಚಿಹ್ನಗಳು ಬೀದಿಯಲ್ಲಿ ಕಾಣುತ್ತಿದ್ದವು. ಅತ್ತಿತ್ತ ವಿದ್ಯುದ್ದೀಪಗಳ ಚಕಚಕಾಟವಿತ್ತು. ಆದರೆ ವತ್ಸಲೆಯ ಹೃದಯದೊಳಗಿನ ಕತ್ತಲೆಯನ್ನು ಎಳ್ಳಷ್ಟು ಕೂಡ ಬೆಳಗುವ ಸಾಮರ್ಥ್ಯವು ಅವುಗಳಿಗೆ ಇರಲಿಲ್ಲ. ಎದುರಿನ ಬಂಗಲೆಯಿಂದ ಹಾಡಿನ ಮಂಜುಳ ಸ್ವರವು ಕೇಳಬರುತ್ತಿತ್ತು. ಆದರೆ ನಿರಾಶೆಯು ಅವಳ ಭಗ್ನವಾದ ಹೃದಯವೀಣೆಯ ಮೇಲೆ ಮೃತ್ಯುಗೀತವನ್ನೇ ಬಾರಿಸುತ್ತಿತ್ತು. ನಡುವೇ ಅವಳಿಗೆ ಅನಿಸುತ್ತಿತ್ತು–ರಮಾಕಾಂತನು ತನ್ನನ್ನು ಧಿಕ್ಕರಿಸಿ ಆ ಸುರಂಗೆಯೊಡನೆ ಬೆಳ್ದಿಂಗಳಲ್ಲಿ ತಿರುಗಲಿಕ್ಕೆ ಹೋದನೆಂಬುದು ಕೇವಲ–ಸ್ವಪ್ನದಲ್ಲಿಯ ಭಾಸವೆಂದು. ಈ ಸ್ವಪ್ನದಿಂದ ಎಚ್ಚರಹೊಂದಬೇಕೆಂದು ಅವಳು ಧಡಪಡಿಸಹತ್ತಿದಳು. ಆದರೆ ಅವಳ ತೊಡೆಯ ಮೇಲೆ ಬಿದ್ದಿರುವ ರಮಾಕಾಂತನ ಆ ವಹಿಯು ಪುಟಪುಟದಲ್ಲಿಯೂ ಸಾರಿ ಹೇಳುತ್ತಿತ್ತು–'ಈ ಸ್ವಪ್ನದಿಂದ ಎಚ್ಚರಿಯಲಿಕ್ಕೆ ಒಂದೇ ಒಂದು ಮಾರ್ಗವಿದೆ. ಅದು ಸಾವು!'

ಗಾಜುಪಟ್ಟ ಜಾಗೆಯ ಮೇಲೆ ಕೈಯಾಡಿಸುವದರಿಂದ ಅದೇನೂ ಮಾಯುವದಿಲ್ಲ. ಆದರೆ ಹಾಗೆ ಕೈಯಾಡಿಸುವ ಮೋಹವು ತಡೆಯದಾಗುತ್ತದೆ. ರಮಾಕಾಂತನ ಆತ್ಮವೃತ್ತವನ್ನು ತೆರೆದು ಯಾವೊಂದು ಪುಟವನ್ನು ಓದಿ ವತ್ಸಲೆಯು ಮತ್ತೆ ವಿಚಾರಮಗ್ನಳಾಗುತ್ತಿದ್ದಳು. ಒಂದು ಪುಟದಲ್ಲಿ ಬರೆದಿತ್ತು—

'ವತ್ಸಲೆಯೊಡನೆ ಲಗ್ನಮಾಡಿಕೊಳ್ಳಲಿಕ್ಕೆ ನಾನು ಒಪ್ಪಬಾರದಿತ್ತು. ಆದರೆ ತಂದೆಯವರ ಅಂಜಿಕೆ! ಅವರು ಸಬ್ ಇನಸ್ಪೆಕ್ಟರರಾಗಿದ್ದಾಗ ಒಬ್ಬ ಆರೋಪಿಗೆ ಸಾಯುವ ಹಾಗೆ ಹೊಡೆದದ್ದನ್ನು ನಾನು ಚಿಕ್ಕವನಿದ್ದಾಗ ನೋಡಿದೆ. ಆ ಬಡರಾಟಚೀರಾಟವನ್ನು ಕೇಳಿ ನಾನು ಓಡುತ್ತಲೇ ಒಳಗೆ ಹೋದೆ. ಆ ಮನುಷ್ಯನ ವೇದನೆಯಿಂದಲೂ ತಂದೆಯವರ ಉಗ್ರ ಮುಖದಿಂದಲೂ ನಾನಿಷ್ಟು ಗಾಬರಿಯಾದೆನಲ್ಲ, ಮುಂದೆ ತಂದೆಯವರಿಂದ ಏನಾದರೂ ಬೇಡುವದಾದರೆ ನಾನು ತಾಯಿಯನ್ನು ಮಧ್ಯಸ್ಥಳನ್ನಾಗಿ ಮಾಡಬೇಕಾಗುತ್ತಿತ್ತು. ತಮ್ಮ ಮಗನು ಎಷ್ಟು ಆಜ್ಞಾಧಾರಕನೆಂದು ತಂದೆಯವರಿಗೆ ಅನಿಸುತ್ತಿತ್ತು. ಈ ಆಜ್ಞಾಧಾರಕತ್ವದಿಂದಲೇ ನನ್ನ ಲಗ್ನವು ಹಾಳುಹಾಳಾಯಿತು. ನಾನು ಒಲ್ಲೆನೆಂದಿದ್ದರೆ ಅವರು ಆಸ್ತಿಯ ಮೇಲಿನ ನನ್ನೆಲ್ಲ ಹಕ್ಕುಗಳನ್ನು ಕಸಿದುಕೊಳ್ಳುತ್ತಿದ್ದರು. ಅಲ್ಲಿಂದ ಕಲೆಯ ಉಪಾಸನೆಗೆ ಬೇಕಾಗುವ ಸ್ವಾಸ್ಥ್ಯವು ನನಗೆಲ್ಲಿ ಸಿಗುತ್ತಿತ್ತು? ಈ ಎಲ್ಲ ಮಾತಿನಲ್ಲಿ ವತ್ಸಲೆಯು ನಿಷ್ಕಾರಣವಾಗಿ ಬಲಿಯಾದಳೆಂದು ಒಮ್ಮೊಮ್ಮೆ ಅನಿಸುತ್ತದೆ. ಆದರೆ ಅದಕ್ಕೆ ನಾನೇನು ಮಾಡಲಿ? ಏನನ್ನು ಸಾರು ಬೇಕಾದರೆ ಜಾಗೆಯಲ್ಲಿ ಸಿಕ್ಕ ಹೂಗಳ ಒಡ್ಡಾಟವನ್ನು ನೋಡಿ ಎದೆ ಕರಗಿ ಪ್ರಯೋಜನವಿಲ್ಲ. ವತ್ಸಲೆಯಂಥ ಕುರೂಪಿಯಾದ ಕನ್ಯೆಯ ಹುಡುಗಿಯ ಕೂಡ ಸಂಸಾರ ಮಾಡಲಿಕ್ಕೆ ನಾನೇನು ಕೊಂಕಣದಲ್ಲಿಯ ಗೇರುಹಣ್ಣಿನ ಕಾರಖಾನೆಯಲ್ಲಿ ಕೆಲಸ ಮಾಡುವ ಕೂಲಿಕಾರನೇ? ಮನುಷ್ಯನ ಮನಸ್ಸು ಪಾತರಗಿತ್ತಿಯಂತೆ ಇರುತ್ತದೆ. ಜೇನು ಇಲ್ಲದ ಹೂವಿನಿಂದ ಹಾರಿ ಅದು ಇನ್ನೊಂದಕ್ಕೆ ಹೋದರೆ ಅದು ಆ ನೀರಸವಾದ ಹೂವಿನ ದೋಷವೇ ಅಲ್ಲವೇ?....

ಮೂರು ನಾಲ್ಕು ಪಾಸುಗಳನ್ನು ಬಿಟ್ಟು ಮತ್ತೊಂದನ್ನು ಅವಳು ಓದ ತೊಡಗಿದಳು ‘ ತಾಯಿ ತೀರಿಕೊಂಡ ಮೇಲೆ ತಂದೆ ನನ್ನನ್ನು ಬೋರ್ಡಿಂಗಿನಲ್ಲಿ ಇಟ್ಟರು. ಚಲೋ ಜೇಲಿನಲ್ಲಿಯ ಕೈದಿಗಳಂತೆ ಅಲ್ಲಿಯ ಶಿಸ್ತು ಇತ್ತು. ಆದರೆ ಶಿಸ್ತು ಎಷ್ಟೇ ಕಡಕಾಗಿದ್ದರೂ ತುರಂಗದಲ್ಲಿಯ ಕೈದಿಗಳು ತಮಗೆ ಬೇಕಾದ್ದನ್ನು ದೊರಕಿಸುವದಿಲ್ಲವೇ? ನಾನು ಅಭ್ಯಾಸದ ಪುಸ್ತಕದ ನಡುವೆ ಕಾದಂಬರಿಗಳನ್ನಿಟ್ಟು ಓದುತ್ತಿದ್ದೆ. ಸುಪರಿಂಟೆಂಡೆಂಟರು ಒಮ್ಮೆ ನಮಗೆ ನಾಟಕಕ್ಕೆ ಹೋಗಲು ಅಡ್ಡಿ ಮಾಡಿದರು. ನಾವು ಕಾವಲಿಗನನ್ನು ಕೈವಶಮಾಡಿಕೊಂಡು ಅವರನ್ನು ಹೇಗೆ ಮೋಸಮಾಡಿದೆವು ಹಾಗೂ ಮರುದಿವಸದಿಂದ ಆ ನಾಟಕದೊಳಗಿನ ಪದಗಳನ್ನು ಒದರಿ ಒದರಿ ಹಾಡಿ ಇಡೀ ಬೋರ್ಡಿಂಗನ್ನು ಹೇಗೆ ನಮ್ಮ ತಲೆಯ ಮೇಲೆ ತಗೊಂಡೆವು ಇದನ್ನೆಲ್ಲ ನೆನೆದರೆ ಇಂದಿಗೂ ನನಗೆ ನಗೆ ತಡೆಯಲಿಕ್ಕಾಗುವದಿಲ್ಲ.

ಮನುಷ್ಯನೆಂದರೇನು ಹತ್ತಿಯಂತೆ ನಿರ್ಜೀವವಾದ ಕಚ್ಚಾ ಮಾಲೇ?—ಅವನಿಂದ ಬೇಕಾದ ತರದ ಪಕ್ಕಾ ಮಾಲು ಮಾಡಲಿಕ್ಕೆ ಬರುವದೇ? ತಂದೆಗೆ ಮಗನು ತನ್ನಂತೆ ಆಗಬೇಕೆಂದು ಅನಿಸುತ್ತದೆ. ಆದರೆ ಅವನು ಹಾಗೆ ಆಗುವದಿಲ್ಲವೆಂದು ಶಿಕ್ಷಿಸುವದಾದರೆ ಬ್ರಹ್ಮನನ್ನು ಶಿಕ್ಷಿಸಿರಿ. ಬಡಹುಡುಗನನ್ನೇಕೆ? ತಂದೆಯವರ ನೀರು ರಕ್ತದಲ್ಲಿ ಮೂರು ಪಾಲಾದರೂ ಪೋಲೀಸರಕ್ತವಿರಬೇಕು. ಇಷ್ಟಿದ್ದರೂ ನನ್ನ ರಕ್ತದಲ್ಲಿ ಅದರ ಒಂದು ಹನಿಯೂ ಇಳಿದಿಲ್ಲ. ಇದಕ್ಕೆ ಯಾರು ಹೊಣೆಗಾರರು? ‘ಚೌರ್ಯ’ದ ಹೊರತು ಬೇರೆ ಯಾವ ಕಲೆಗೂ ಪೋಲೀಸ ಖಾತೆಯ ಸಂಬಂಧವಿಲ್ಲ. ಆದರೆ ಸುಂದರ ಚಿತ್ರ, ಸುಂದರ ಹಾಡು, ಸುಂದರ ಮುಖ ಇವುಗಳ ಬಗ್ಗೆ ನನಗೆ ಚಿಕ್ಕಂದಿನಿಂದಲೂ ಆಕರ್ಷಣವೆನಿಸುತ್ತ ಬಂದಿತು. ಬೋರ್ಡಿಂಗಿನಲ್ಲಿ ವರ್ಗದ ಮೊದಲನೆಯ ನಂಬರಿನವನ ಕೂಡ ನನ್ನದೆಲ್ಲಿ ಗೆಳೆತನವಿತ್ತು? ಆ ಕುಳವು ಚೆಂಡಿಕೆಗೆ ಗಂಟು ಹಾಕಿ ತನ್ನ ಅಷ್ಟಾವಕ್ರವಾದ ಬಾಯಿಂದ ಘೋಕು ಹೊಡೆಯುವದರಲ್ಲಿ ತೊಡಗಿರುತ್ತಿತ್ತು. ಅವನಂಥ ಕಾಡು ಹುಡುಗನಿಂದ ನಾನು ನಾಲ್ಕು ಮೊಳ

ದೂರವೇ ಇರುತ್ತಿದ್ದೆ. ನನ್ನ ಮಿತ್ರ ಆ ಮನೋಹರ. ಒಬ್ಬ ಪಾಠಕರ ದವಳ ಮಗನವನು. ಎಷ್ಟು ನಾಜೂಕ ಎಷ್ಟು ಸುಂದರ ಕಾಣುತ್ತಿದ್ದ. ಕೂದಲಿನ ನಟ್ಟನಡುವೆ ಬೈತಲ ತೆಗೆದು ಅವನು ಬಂದನೆಂದರೆ ನಾನು ಅನ್ನುತ್ತಿದ್ದೆ ಅವನಿಗೆ 'ಮನ್ಯಾ, ಸ್ವಲ್ಪದರಲ್ಲಿ ತಪ್ಪಿತು! ನೀನು ಹೆಣ್ಣಾಗೇ ಹುಟ್ಟಬೇಕಾಗಿತ್ತು!' ಅವನು ಯಾವದೋ ನಾಟಕ ಕಂಪನಿ ಸೇರಿದ ನಂತೆ. ಮುಂದೆ ದನಿ ಒಡೆದು ಚೂರಾಯಿತು. ಅಲ್ಲಿಂದ ಈಗ ಎಲ್ಲಿರು ವನೋ ಯಾರಿಗೆ ಗೊತ್ತು?

ಮುಂದಿನ ಒಂದು ಪುಟವನ್ನು ವತ್ಸಲೆ ತೆರೆದಳು.

'ನಾನು ದೇವರಾಗಿದ್ದರೆ ರಾತ್ರಿಯನ್ನು ಯಾವಾಗಲೂ ಹುಣ್ಣಿವೆ ಯದೇ ಮಾಡಿಬಿಡುತ್ತಿದ್ದೆ. ಎರಡು ಗುಲಾಬೀಗಲ್ಲಗಳ ನಡುವೆ ಚೆಂದಾದ ಹಲ್ಲಿನ ಸಾಲು ಕಾಣುವಂತೆ ನನ್ನ ಸೃಷ್ಟಿಯಲ್ಲಿ ಸಂಜೆಮುಂಜಾವುಗಳ ನಡುವೆ ಬರೀ ಚಿಕ್ಕೆಗಳು ಕಾಣುತ್ತಿದ್ದವು. ನನ್ನ ಸೃಷ್ಟಿಯಲ್ಲಿ ಹಲಸಿ ಹಣ್ಣಿನ ಒಳಗೆ ರಸದುಂಬಿದ ತೊಳೆಗಳು ಇರುತ್ತಿದ್ದವಲ್ಲದೆ ಮೊಸಳೆ ಯಂತಿದ್ದ ಅವುಗಳ ಮೈಯನ್ನು ಚಿಗರೆಯ ಹಾಗೆ ಮಾಡುತ್ತಿದ್ದೆ. ಈಗಿದ್ದ ಈ ಸೃಷ್ಟಿಯನ್ನು ಮಾಡಿದ ಬ್ರಹ್ಮನು ಭೋಳೆ ಸ್ವಭಾವದ ತಾಯಿಯಂತಿರುವನು. ತನ್ನ ಮುದ್ದು ಕೂಸಿಗೆ ದೃಷ್ಟಿಯಾಗಬಾರದೆಂದು ತಾಯಿ ಹೇಗೆ ಗಲ್ಲಕ್ಕೆ ಕಾಡಿಗೆ ಬೊಟ್ಟು ಇಡುವಳೋ ಹಾಗೆ ಅವನು ಪ್ರತಿಯೊಂದು ಸುಂದರವಸ್ತುವನ್ನು ಸದೋಷ ಮಾಡಿಟ್ಟಿರುವನು. ಸರ ಸ್ವತಿಯು ಇಂಥ ಈ ಅರೆಹುಚ್ಚ ಬ್ರಹ್ಮದೇವನ ಕನ್ಯೆಯೆಂದು ಹೇಳುವವರು ಹುಚ್ಚರೇ ಸರಿ'

ವತ್ಸಲೆಯು ಖಿನ್ನಮನಸ್ಸಿನಿಂದ ಕೈಗೆ ಬಂದ ಪುಟ ತೆರೆದು ಓದುತ್ತಿದ್ದಳು.

'ಜೀವನದ ಉದ್ದೇಶವೇನು? ಸೌಂದರ್ಯಲಾಭ. ಕಪ್ಪುಕರೀ ಮೋಡಗಳಿಂದ ತುಂಬಿದ ಆಕಾಶವನ್ನು ನಾನು ನೋಡಲಾರೆ. ಆದರೆ ಅದೇ ಈ ಕರ್ರಗಿನ ತಬಲೆ-ಡಗ್ಗೆಗಳ ಮೇಲೆ ಸೃಷ್ಟಿಸುಂದರಿಯ ಮಿಂಚಿನ ಕೈಯು ಕುಣಿಯಹತ್ತಿತೆಂದರೆ ನನ್ನ ಮನಸ್ಸು ಮುಗ್ಧವಾಗಿ

ಹೋಗುತ್ತದೆ. ಮಳೆಯ ನೋಟವು ಮನೋವೇಧಕವೇನೋ ಹೌದು. ಆದರೆ ಸೂರ್ಯನ ಸ್ವಾಗತಕ್ಕಾಗಿ ಆಕಾಶವು ಮಳೆಬಿಲ್ಲಿನ ತೋರಣ ಕಟ್ಟುವ ನೋಟವು ನನಗೆ ಹೆಚ್ಚು ಮೋಹಕವೆನಿಸುತ್ತದೆ.

ಚಿಕ್ಕಂದಿನಿಂದ ನನ್ನ ಸೌಂದರ್ಯಾಸಕ್ತಿಯು ಬೆಳೆಯುತ್ತ ಬಂದಿತು. ಕೂದಲಾಗಲಿ ಬಟ್ಟೆಯಾಗಲಿ ಹೊಲಸುತನವು ನನಗೆ ಎಳ್ಳಷ್ಟೂ ಸೇರುವದಿಲ್ಲ. ನನಗೆ ಯಾರಾದರೂ ಸರ್ವಾಧಿಕಾರವನ್ನು ಕೊಟ್ಟರೆ ಕುರೂಪಿ ಜನರನ್ನೂ ಅಸಹ್ಯವಸ್ತುಗಳನ್ನೂ ಒಂದು ಕ್ಷಣದಲ್ಲಿ ಜಗತ್ತಿನಲ್ಲಿ ಇಲ್ಲದಂತೆ ಮಾಡುವೆನು.'

ಕಾಲೇಜಿನಲ್ಲಿ ನಾನು ಹುಡುಗಿಯರ ಬಾಕಿನ ಹತ್ತಿರ ಬೇಕೆಂತಲೆ ಕೂಡುತ್ತಿದ್ದೆ. ಆ ಹೊತ್ತಿಗೆ ಕಿಡಿಗೇಡಿ ಹುಡುಗರು ನನ್ನ ಚೇಷ್ಟೆ ಮಾಡುತ್ತಿದ್ದರು. ಆದರೆ ಈಗ ಲೋಕಪ್ರಿಯವಾದ ನನ್ನ ಕತೆಗಳಿಗೂ ಆ ಕೂಡುವದಕ್ಕೂ ಸಂಬಂಧವಿರುವದೆಂದು ಹೇಳಿದರೆ ಯಾರಿಗೂ ಈಗ ನಿಜವೆಂದು ತೋರಲಿಕ್ಕಿಲ್ಲ. ಸುಂದರ ತರುಣಿಯೆಂದರೆ ಎಲ್ಲ ಕಲೆಗಳ ಮನೋಹರ ಸಂಗಮವಲ್ಲವೇ? ಅವಳ ಮೈಸಿರಿ, ತುಟಿ, ಗಲ್ಲ, ಕೂದಲು ಎಂದರೆ ಚಿತ್ರಕಲೆಯ ಪ್ರದರ್ಶನದ ಬೇರೆ ಬೇರೆ ವಿಭಾಗಗಳೇ ಸರಿ. ಅವಳ ಮುದ್ದುಮಾತು, ಮಂಜುಳ ಗುಣುಗುಣು, ಸವಿ ಹಾಡು ಇವುಗಳಲ್ಲಿ ಗಾಯನ ಕಲೆಯು ಮೂರ್ತಿಮಂತವಾಗಿ ಕಾಣುತ್ತದೆ. ಸುಂದರ ಸ್ತ್ರೀಯ ಸರಳ ನಡಿಗೆಯು ಕೂಡ ನೃತ್ಯಕಲೆಯ ಪಾಠವೇ ಆಗಿರುತ್ತದೆ.

ಕಲಾವಿದನ ಸೌಂದರ್ಯದೃಷ್ಟಿಯು ಹೆಚ್ಚಾದಂತೆ ಅವನಿಗೆ ಸುಂದರ ಸ್ತ್ರೀಯ ರೂಪದಿಂದಾಗುವ ಆಕರ್ಷಣವೂ ಹೆಚ್ಚು. ಚಿಕ್ಕವನಿದ್ದಾಗ ನೆರೆಮನೆಯ ಒಂದು ಚಿಕ್ಕ ಹುಡುಗಿಗೆ ನಾನು ಆಟದಲ್ಲಿ ಮುದ್ದು ಕೊಟ್ಟನೆಂದು ತಂದೆಯವರು ನನ್ನನ್ನು ಚೆನ್ನಾಗಿ ಥಳಿಸಿದ್ದರು. ನಾನೇನೋ ಕೆಟ್ಟ ಕೆಲಸ ಮಾಡಿರಬೇಕೆಂದು ಆಗ ನನಗೆ ಕೂಡ ಅನಿಸಿತು. ಆದರೆ ಅದು ನನ್ನ ರಕ್ತದಲ್ಲಿದ್ದ ಕಲಾಸಕ್ತಿಯ ಪರಿಣಾಮವೆಂದು ಈಗ ತೋರುತ್ತದೆ. ನಮ್ಮ ಮನೆಯಲ್ಲಿ ಚಂದ್ರಿ ಎಂಬ ಚೆಲುವೆಯಾದ ಒಕ್ಕಲಗಿತ್ತಿ ಯಿದ್ದಳೆಂದು ನನಗೆ ನೆಟ್ಟಗೆ ನೆನಪಿದೆ. ಅವಳ ಕೂಡ ಅತ್ತಿಂದಿತ್ತ

ಬುಡುಬುಡು ಮಾಡುವಾಗ ನನಗೆಷ್ಟು ಆನಂದವಾಗುತ್ತಿತ್ತು. ಮುಂದೆ ಆವಳು ಸತ್ತಳೋ ಎಲ್ಲಿಯಾದರೂ ಹೋದಳೊ. ಇನ್ನೊಬ್ಬ ಕೆಲಸಗಿತ್ತಿ ಬಂದಳು. ನನ್ನ ಕೆಲಸಗಳು ಮೊದಲಿನಂತೇ ನಡೆದವು. ಆದರೆ ಚಂದ್ರಿಯಿಲ್ಲೆಂದು ಒಂದೆರಡು ಸಾರೆ ನಾನು ಮುಸುಮುಸುಮಾಡಿ ಅತ್ತೆ ಕೂಡ. ಸೂಟಿಯಲ್ಲಿ ತಂದೆಯವರ ಹತ್ತಿರ ಇರಲಿಕ್ಕೆ ಹೋದಾಗ ಪೇಟೆಯಿಂದ ಪಲ್ಲೆಕಾಯಿ ತರುವದಾದರೆ—ಅತಿ ಕುರೂಪಿ ಕಾಣುವ ಹೆಂಗಸಿನ ಬಳಿ ಒಳ್ಳೆಯ ಪಲ್ಲೆಯನ್ನು ಮಾರಲಿಕ್ಕೆ ತಗೊಳ್ಳುವದೆಂದರೆ ನನ್ನ ಜೀವದ ಸುತ್ತು ಬರುತ್ತಿತ್ತು.

ಶಾಲೆ—ಕಾಲೇಜುಗಳಲ್ಲಿ ಈ ಸೌಂದರ್ಯಾಸಕ್ತಿಯು ವಾಚನದಿಂದ ಇನ್ನೂ ಹೆಚ್ಚು ಬೆಳೆಯಿತು. ನಾಟಕ—ಸಿನೇಮಾಗಳನ್ನು ನೋಡಿದ ಮೇಲಂತೂ ಕಪ್ಪು ಹಾಗೂ ಕುರೂಪಿ ಜನರ ಬಗ್ಗೆ ನನಗೆ ಹೇಸಿಕೆಯೇ ಹುಟ್ಟಿತು. ಎಲ್. ಎಲ್. ಬಿ. ಯಲ್ಲಿ ನಾನು ಎರಡು ಮೂರು ಸಾರೆ ನಪಾಸಾಗಲು ತಂದೆಯವರು ನನಗೆ ನೌಕರಿಯ ಶೋಧಮಾಡಹತ್ತಿದರು. ಆದರೆ ಹುಡುಗರ ಶಾಲೆಯಲ್ಲಿಯ ಹೆಚ್ಚಿನ ಪಗಾರದ ಕೆಲಸವನ್ನು ಬಿಟ್ಟುಕೊಟ್ಟು ನಾನು ಹುಡುಗೆಯರ ಶಾಲೆಯಲ್ಲಿ ಕಡಿಮೆ ಪಗಾರದ ಕೆಲಸವನ್ನು ಹಿಡಿದೆ. ನನ್ನ ಸ್ವಾರ್ಥತ್ಯಾಗವನ್ನೂ ಸ್ತ್ರೀಶಿಕ್ಷಣದ ವಿಷಯದಲ್ಲಿ ನನ್ನ ಕಳಕಳಿಯನ್ನೂ ಆ ಹೊತ್ತಿಗೆ ವರ್ತಮಾನಪತ್ರಗಳು ಎಷ್ಟು ಹೊಗಳಿದವು. ಈ ತಲೆಮಾಸಿದ ಸಂಪಾದಕರ ಬುದ್ಧಿ ಹರಿಯುವದು ಅಷ್ಟೇ! ಹುಡುಗರ ಶಾಲೆಗಿಂತ ಹುಡುಗೆಯರ ಶಾಲೆಯಲ್ಲಿ ನನ್ನ ವಿಶುದ್ಧವಾದ ಸೌಂದರ್ಯದೃಷ್ಟಿಯ ಪೋಷಣವು ಹೆಚ್ಚಾಗುವದೆಂಬ ಹೇತುವಿನಿಂದ ಈ ಕೆಲಸವನ್ನು ಕೈಕೊಂಡೆ. ನನ್ನ ತರ್ಕವೆಲ್ಲಿ ಸುಳ್ಳಾಗಿತ್ತು? ಇದೇ ಅವಧಿಯಲ್ಲಿ ನಾನು ಕಥಾಲೇಖಕನೆಂದು ಲೋಕಪ್ರಿಯನಾದೆ. ಈ ಕಥೆಗಳಲ್ಲಿಯ ತರುಣಿಯರ ಸುಂದರ, ಸ್ಪಷ್ಟ ಹಾಗೂ ಸಜೀವ ವರ್ಣನೆಗಳ ಸ್ಫೂರ್ತಿಯು ನನಗೆ ಹುಡುಗರ ಶಾಲೆಯಲ್ಲಿ ಬರುತ್ತಿತ್ತೇ? ಹುಡುಗೆಯರ ವರ್ಗವೆಂದರೆ ಚೆಂದಾದ ಹೂದೋಟ. ಹುಡುಗರ ವರ್ಗ—ಅದೆಷ್ಟು ನೆಟ್ಟಗಿದ್ದರೂ—ಹಣ್ಣಿನ ತೋಟ! ಐದನೇ ಇಯತ್ತೆಯಲ್ಲಿ

ಇದ್ದ ಆ ಉಷಾ ಖರೆ! ಅವಳು ಆರನೆಯ ಇಯತ್ತೆಗೆ ಹೋಗಲು ಆ ವರ್ಗಕ್ಕೆ ನನ್ನ ತಾಸು ಇಲ್ಲದಿದ್ದರೂ ನಾನು ಬೇಕೆಂತ ಬೇಡಿ ಒಂದು ತಾಸು ತಗೊಳ್ಳಲಿಲ್ಲವೆ? ಉಳಿದ ಹುಡುಗಿಯರಿಗಿಂತ ಅವಳು ನನಗೆ ಹೆಚ್ಚು ಸೇರುತ್ತಿದ್ದಳೆಂಬುದು ಇನ್ನೊಬ್ಬರಿಗೆ ತಿಳಿಯುವದು ಕೂಡ ಶಕ್ಯವಿಲ್ಲ. ಇದೇ ನಿಜವಾದ ವಿಶುದ್ಧ ಸೌಂದರ್ಯದೃಷ್ಟಿ. ಈ ನಾಟಕ ವನ್ನು ಕೂಡಿಸುವ ನೆವದಿಂದ ನಾನು ಶಾಲೆಯ ಕೆಲಸದಿಂದ ರಜೆ ಪಡೆದೆ. ಆದರಲ್ಲಿಯೇ ತಂದೆಯವರ ಮರಣವೂ ಕೂಡಿತು. ಕಲೆಯ ಉಪಾಸನೆ ಯನ್ನು ಮಾಡುವದಾದರೆ ಹನ್ನೊಂದರಿಂದ ಐದರ ವರೆಗಿನ ಶಾಲೆಯ ಚಕ್ರದಲ್ಲಿ ಸಿಕ್ಕು ಉಪಯೋಗವಿಲ್ಲ. ಆದರೆ ಹುಡುಗಿಯರ ವರ್ಗದಲ್ಲಿ ಕುಳಿತಾಗ ದೊರೆಯುವ ಪವಿತ್ರ ಸೌಂದರ್ಯದ ಆನಂದವನ್ನು ಕಳೆದು ಕೊಳ್ಳಬಾರದೆಂದೂ ಒಮ್ಮೆ ಮನಸ್ಸಿನಲ್ಲಿ ಬರುತ್ತದೆ. ವರ್ಗದಲ್ಲಿ ಏನಾ ದರೂ ಬರೆದುಕೊಳ್ಳಲಿಕ್ಕೆಂದು ಹುಡುಗಿಯರು ಮೋರೆಯನ್ನು ಕೆಳಗೆ ಮಾಡಿದರೆ ಅವರ ತುರುಬಿನ ಕೆಳಗೆ ಬಳ್ಳಿಯ ಕುಡಿಗಳಂತೆ ಆಡುವ ಕಳ್ಳ ಕುರುಳು, ಒಂದು ವಿನೋದವನ್ನು ಮಾಡಿದರೆ ಅವರ ಮುಖದಲ್ಲಿ ತಲೆ ದೋರುವ ನಾಚಿಕೆಯ ಕುಣಿತ—ಆದರೆ ಸೌಂದರ್ಯದ ಈ ಸಂಕುಚಿತ ಕ್ಷೇತ್ರದಲ್ಲಿ ನಾನು ಬೀಳುವದೇನು ಅವಶ್ಯವಿದೆ? ನನ್ನ ಸೌಂದರ್ಯ ದೃಷ್ಟಿಯ ಪೋಷಣವು ಮುಗ್ಧ ಹುಡುಗಿಯರಿಗಿಂತ ಕಲಾಚತುರೆಯರಾದ ತರುಣಿಯರ ಸಹವಾಸದಲ್ಲಿ ಹೆಚ್ಚಾಗಲಿಕ್ಕಿಲ್ಲವೆ? ಹೋದೆರಡು ತಿಂಗಳಲ್ಲಿ ಸುರಂಗೆಯ ಕೂಡ ನನಗೆಷ್ಟು ನಿಕಟ ಸಂಬಂಧವು ಬಂದಿತು! ಕಥೆಗಳ- ಲ್ಲಿಯ ಚಿತ್ರಗಳ ನಿಮಿತ್ತದಿಂದ ಆ ಸುಲೋಚನೆಯ ಗುರುತೂ ಆಯಿತು. ಅವರ ಪರಿಚಯವಾದ ಕಾರಣ ವತ್ಸಲೆಯ ಕುರೂಪವೂ ಕಲಾಹೀನ- ತೆಯೂ ಈಗ ನನಗೆ ತೀರ ಅಸಹ್ಯವಾಗಿವೆ!' ಸಾಲಾಗಿ ಬರೆದ ಈ ಎರಡು ಮೂರು ಪಾನುಗಳನ್ನೋದಿ ವತ್ಸಲೆಯ ಕಣ್ಣಲ್ಲಿ ನೀರು ತುಂಬಿದವು. ಒಂದೆರಡು ಹನಿ ಪಾನಿನ ಮೇಲೆ ಬಿದ್ದವು ಕೂಡ. ಆದರೆ ಇಷ್ಟರಲ್ಲಿ ಏನೋ ವಿಚಾರ ಮಾಡಿ ಅವಳು ಔಡುಗಚ್ಚಿ ವಹಿಯ ಕೊನೆಗೆ ಬರೆದ ಪುಟವನ್ನು ತೆರೆದಳು.

‘ನನ್ನ ಲಗ್ನವಾದ ಎರಡು ಮೂರು ತಿಂಗಳಲ್ಲಿಯೇ ಕ್ಷಯದಿಂದ ಬೇನೆ ಬಿದ್ದು ತಂದೆಯವರು ನನ್ನ ಮೇಲೆ ದೊಡ್ಡದೊಂದು ಉಪಕಾರವನ್ನೇ ಮಾಡಿದರು! ಅವರನ್ನು ಹವೆಯ ಸಲುವಾಗಿಯೂ ವತ್ಸಲೆಯನ್ನು ಅವರ ಶುಶ್ರೂಷೆಗಾಗಿಯೂ ಪಾಂಚಗಣಿಯಲ್ಲಿ ಇಟ್ಟು ನಾನು ಮುಂಬಯಿಯಲ್ಲಿ ಇಡೀ ಒಂದು ವರುಷ ಸುಖದಿಂದ ಇರುವದು ಶಕ್ಯವಾಯಿತು. ಆದರೆ ಈಗ ತಂದೆ ತೀರಿದರು. ಎಂಟು ದಿವಸದ ಹಿಂದೆ ಈ ಪೀಡೆಯು ಮನೆಯಲ್ಲಿರಲಿಕ್ಕೂ ಬಂದಿತು. ತಮ್ಮ ಸೋದರತ್ತೆಯ ಕಡೆಗೆ ಹೋಗೆಂದರೆ ಅವಳು ತೀರ ಒಪ್ಪುವದೇ ಇಲ್ಲ. ಇವಳ ಸಂಗತಿಯಲ್ಲಿ ದಿವಸಗಳನ್ನು ನೂಕುವದು—ಅವಳಲ್ಲಿ ಅಂಥದು ಏನಿದೆ? ಲಗ್ನದ ಹೊತ್ತಿಗೆ ತಂದೆ ಅನ್ನುತ್ತಿದ್ದರು: ‘ಹುಡುಗಿ ಬಹಳ ಮೆತ್ತಗಿನ ಮನಸ್ಸಿನವಳು ಒಂದು ನಾಯಿಯ ಕುನ್ನಿ ಸತ್ತಿತೆಂದು ಒಂದು ದಿವಸ ಇವಳು ಒಂದೇಸವನೆ ಅಳುತ್ತಿದ್ದಳೆಂದು ಇವರ ಮಾವನು ತಂದೆಯವರ ಮುಂದೆ ಸುಳ್ಳು ಹೇಳಿದನು. ಲಗ್ನಮಾಡಿಸುವದಕ್ಕಾಗಿ ಸುಳ್ಳು ಹೇಳಲಿಕ್ಕೆ ಸಹ ಅವರು ಹಿಂದೆಮುಂದೆ ನೋಡಿರಲಿಕ್ಕಿಲ್ಲ. ನಮ್ಮ ತಂದೆಯೇನು? ಪೆನ್ಸ್ಯನ್ ಆದಕೂಡಲೆ ಪೋಲೀಸ ಖಾತೆಯ ಸಂಬಂಧ ತಪ್ಪಿತು! ಅಷ್ಟರಿಂದಲೇ ಖುಷಿಯಾಗಿಬಿಟ್ಟರು. ಆದರೆ ನಾಯಿ-ಬೆಕ್ಕುಗಳ ಸಲುವಾಗಿ ಅಳುತ್ತ ಕೂಡುವ ಹೆಂಡತಿಯಿಂದ ತಮ್ಮ ಕಲಾಪ್ರೇಮಿಯಾದ ಮಗನಿಗೆ ಎಳ್ಳಷ್ಟೂ ಉಪಯೋಗವಿಲ್ಲೆಂದು ಅವರ ಲಕ್ಷ್ಯದಲ್ಲಿ ಬರಲಿಲ್ಲ. ಬರಬೇಕಾದರೂ ಹೇಗೆನ್ನಿರಿ. ಪೋಲೀಸ ಖಾತೆಯಲ್ಲಿ ಅವರ ಇಡೀ ಜನ್ಮ ಹೋಯಿತು. ಶೇಣವೆಯರ ಮನೆಯಲ್ಲಿ ಕುಡಾಳ ದೇಶಸ್ಥರ ಹುಡುಗಿಯನ್ನು ಮದುವೆ ಮಾಡಿಕೊಳ್ಳುವ ಈ ಸುಧಾರಣೆಯು ತಂದೆಯವರಿಗೆ ಸುಮ್ಮನೆ ಹೊಳೆಯಲಿಲ್ಲ. ನನ್ನ ಚಿಕ್ಕಂದಿನ ಸುದ್ದಿ. ತಂದೆಯವರಿಗೆ ಕೊಂಕಣಕ್ಕೆ ಬದಲಿ ಆಗಿತ್ತು. ಎಲ್ಲಿಯದೋ ಒಂದು ಪೋಲೀಸ ತೊಡಕು ಅವರ ಕೊರಳಿಗೆ ಬಂದು ಬಿದ್ದಿತು. ಜೀವ ಹೋಗುವದೋ ಉಳಿಯುವದೋ ಎನ್ನುವಂತೆ ಸ್ಥಿತಿಯಾಯಿತಂತೆ. ಆಗ ವತ್ಸಲೆಯ ತಂದೆ ಅವರನ್ನು ಬಿಡಿಸಿಕೊಟ್ಟರು. ಪಾಪ ತಂದೆಯದು, ಪ್ರಾಯಶ್ಚಿತ್ತ ಮಗನಿಗೆ! ಒಳ್ಳೇ ನ್ಯಾಯ!

ಆದರೆ ಈ ಅಂಧನಗರಿಯ ನ್ಯಾಯಕ್ಕೆ ನಾನು ತಲೆ ಬಾಗಿಸುವವನಲ್ಲ. ವತ್ಸಲೆಯು ಒಂದು ಮನುಷ್ಯ ಜೀವವೆಂದು ಅವಳ ಬಗ್ಗೆ ನನಗೆ ಸ್ವಲ್ಪ ಕೆಡಕೆನಿಸುತ್ತದೆ. ಆದರೆ ರಾಜನಿಗೆ ಯಾರಾದರೂ ಇದ್ದಲಿಯ ಕಪ್ಪಕಾಣಿಕೆ ಕೊಟ್ಟರೆ ಅದನ್ನು ಮುಕುಟದಲ್ಲಿ ಧರಿಸುವಷ್ಟು ಅವನೇನು ಹುಚ್ಚನಿರುವದಿಲ್ಲ! ಜಗತ್ತಿನಲ್ಲಿ ಸಾಮಾನ್ಯ-ಅಸಾಮಾನ್ಯಗಳ ನಡುವೆ ಎರಡು ಧ್ರುವಗಳ ಅಂತರವು ಉಳಿದೇ ಉಳಿಯುವದು! ಬ್ರಾಹ್ಮಣರಲ್ಲಿ ಹುಟ್ಟಿದಳೆಂದೂ ನನ್ನ ತಂದೆಯವರ ಕೃತಜ್ಞತೆಯು ಜಾಗೃತವಾಯಿತೆಂದೂ ಹತ್ತುಮಂದಿಯಂತೆ ಕಾಣುವ ಈ ಕರ್ರಗಿನ ಹುಡುಗಿ ನನ್ನ ಹೆಂಡತಿಯಾದಳು. ಅದೇ, ಕೀಳು ಜಾತಿಯಲ್ಲಿ ಹುಟ್ಟಿದ್ದರೆ ಕೊಂಕಣದಲ್ಲಿಯ ಯಾವದಾದರೊಂದು ಹಳ್ಳಿಯಲ್ಲಿ ತಲೆಯ ಮೇಲೆ ಮೀನದ ಬುಟ್ಟಿ ಹೊತ್ತು ಪೇಟೆಗೆ ಓಡುತ್ತ ಹೋಗುವದು, ಇಲ್ಲವೆ ಕೂಲಿಯಿಂದ ಮುಸರೆ ತಿಕ್ಕುವದು, ಗೇರುಹಣ್ಣು ಸುಲಿಯುವದು ಇವೇ ಇವಳ ಪಾಲಿಗೆ ಬರುತ್ತಿದ್ದವು. ಹರಕು ಚಿಂದಿಯನ್ನುಡಿಸಿ ಹತ್ತುಮಂದಿ ಒಕ್ಕಲಿಗರ ಹೆಂಗಸರ ನಡುವೆ ಇವಳನ್ನು ನಿಲ್ಲಿಸಿದರೆ ಇವಳು ಬ್ರಾಹ್ಮಣರಲ್ಲಿ ಹುಟ್ಟಿದವಳೆಂದು ಬ್ರಹ್ಮದೇವನಿಗೂ ಅನಿಸಲಿಕ್ಕಿಲ್ಲ. ಇಷ್ಟಿದ್ದು ಇವಳು ನನ್ನ-ಅಂದರೆ ಸೌಂದರ್ಯದ ಸುಂದರ ಚಿತ್ರಗಳನ್ನು ಬರೆಯುವ-ಕಲಾವಂತ ಕಥಾಲೇಖಕನೆಂದು ಮಹಾರಾಷ್ಟ್ರದಲ್ಲಿ ಮೋಹಿನೀಮಂತ್ರವನ್ನೂದುವ ರಮಾಕಾಂತನ-ಹೆಂಡತಿ!'

ಮೊನ್ನಿನ 'ಬಕುಲ'ದಲ್ಲಿಯ 'ಭಾವದಂತೆ ದೇವರು' ಎಂಬ ನನ್ನ ಕಥೆಗೆ ಜನರು ಸುಮ್ಮನೆ ಮೆಚ್ಚಿ ಹೋಗಿರುವರು. ತನ್ನ ತಂದೆಯು ಪ್ರಿಯಕರನೊಡನೆ ತನಗೆ ಮದುವೆ ಮಾಡಿಕೊಡುವದಿಲ್ಲವೆಂದು ನಡುರಾತ್ರಿಯಲ್ಲಿ ಮನೆಬಿಟ್ಟು ಹೋಗುವ ಸುಂದರನಾಯಿಕೆ-ಕುಂಕುಮ ವಳಿಸಿ ಗುಡಿಯ ಆವಾರದಲ್ಲಿ ವಿಧವೆಯೆಂದು ಅವಳ ಇರುವಿಕೆ-ಅವಳ ಮೇಲೆ ಅಲ್ಲಿಯ ಪೂಜಾರಿಯ ಪಾಪದೃಷ್ಟಿ, ಅವನ ಮಾತಿನಲ್ಲಿ ನಂಬಿಗೆಯಿಟ್ಟು ದೇವರಿಗೆ ತನ್ನ ದೂರು-ತೋಡಿಕೊಳ್ಳಲೆಂದು ನಟ್ಟನಡುರಾತ್ರಿಯಲ್ಲಿ ಅವಳು ಗುಡಿಯಲ್ಲಿ ಹೋಗುವದು-ಬೈರಾಗಿಯ ವೇಷದಿಂದ

ತಿರುಗುತ್ತಿದ್ದು ದೇವರ ಮೂರ್ತಿಯ ಹಿಂದೆ ಅಡಗಿಕೊಂಡು ಕುಳಿತ ನಾಯಕನು ಅವಳ ಚೀರಾಟ ಕೇಳಿ ಪೂಜಾರಿಯ ಕೈಯಿಂದ ಅವಳನ್ನು ಬಿಡಿಸುವದು—ಈ ಎಲ್ಲ ಪ್ರಸಂಗಗಳು ಎಷ್ಟು ರಮ್ಯವಾಗಿವೆ ! ಈ ಕಥೆ ಬರೆಯುವಾಗ ಹೆಜ್ಜೆಹೆಜ್ಜೆಗೆ ಸುರಂಗೆಯ ಮೂರ್ತಿಯನ್ನು ಕಣ್ಣಮುಂದೆ ತಂದುಕೊಂಡು ನಾನು ನಾಯಿಕೆಯನ್ನು ಚಿತ್ರಿಸುತ್ತಿದ್ದೆ. ವತ್ಸಲೆಯು ನನ್ನ ಪ್ರತಿಭೆಯನ್ನು ಹೀಗೆ ಪೋಷಿಸುವಳೇ? ಛೇ, ಅದರ ಹೆಸರು ಬೇಡ. . . . . ಈ ವರೆಗೆ ತಂದೆಯವರ ಮುರವತ್ತಿಗಾಗಿ ಸುಮ್ಮನಿದ್ದೆ. ಆದರೆ ಈಗ ಅವಳಿಗೆ ಸ್ಪಷ್ಟ ಹೇಳಲೇಬೇಕು. ಅವಳ ಹಾದಿ ಬೇರೆ, ನನ್ನ ಹಾದಿ ಬೇರೆ. ಒಂದು ಉತ್ತರ ಧ್ರುವ, ಇನ್ನೊಂದು ದಕ್ಷಿಣ ಧ್ರುವ. ಸೌಂದರ್ಯ ಹಾಗೂ ಕಲೆ ಇದು ನನ್ನ ಜೀವನ. ಅವಳ ಜೀವನ—ನನ್ನ ಹೆಂಡತಿಯೆಂದು; ಅವಳು ಸಿರುಗಿನ ಪತ್ತಲ ಉಡಬಹುದು, ಇಂಗ್ರಜೀ ಏಳನೆಯ ಇಯತ್ತೆಯವರೆಗೆ ಹೋಗಿದ್ದರಿಂದ ಬಹಳಾದರೆ ಒಂದರ್ಧ ಕಾದಂಬರಿಯನ್ನು ಓದಬಹುದು. ಅದು ಕೂಡ ಅಶಕ್ಯವೇ ಅನ್ನಿರಿ. 'ಭಾವದಂತೆ ದೇವ' ಎಂಬ ಕತೆಯಿದ್ದ ಸಂಚಿಕೆಯನ್ನು ನಾನೊಮ್ಮೆ ಉಣ್ಣುತ್ತಲೆ ಓದುತ್ತಿದ್ದೆ. ಅದು ಅಲ್ಲಿಯೇ ಉಳಿಯಿತು. ಆದರೆ ಅವಳು ಆ ಕತೆಯ ಬಗ್ಗೆ ಚಕಾರಶಬ್ದವನ್ನಾದರೂ ಆಡಿವಳೇ? ಅದೇ ಸುರಂಗೆಯು ಸಂಜೆಯ ಮುಂದೆ ರಂಗತಾಲೀಮಿನ ಕಾಲಕ್ಕೆ ಕಥೆಯಲ್ಲಿಯ ನಾಯಿಕೆಯ ಬಾಯಲ್ಲಿಯ ಎರಡು ವಾಕ್ಯಗಳನ್ನು ನಡುವೇ ಸೇರಿಸಿ ಎಷ್ಟು ನಗೆ ಹುಟ್ಟಿಸಿದಳು. ಹಾಗೇ ಆ ಸುಲೋಚನೆ. ದೇವಾಲಯದ ಆ ಪ್ರಸಂಗದ ಚಿತ್ರವನ್ನು ಕೂಡಲೇ ಮರುದಿವಸ ತೆಗೆದು ತಂದು ನನಗೆ ತೋರಿಸಿದಳು. ಇನ್ನು ಮುಂದೆ ತಾನೇ ನನ್ನ ಕತೆಗಳಲ್ಲಿಯ ಚಿತ್ರ ಬರೆಯಬೇಕೆಂದು ಅವಳು ನಿಶ್ಚಯಿಸಿಬಿಟ್ಟಿರುವಳು. ಜನ್ಮದ ಜೋಡು ಹೀಗಿದ್ದರೆ ಚೆಂದ! ಇಲ್ಲದಿದ್ದರೆ—

ಜಗತ್ತಿನಲ್ಲಿ ಜಾತಿಗಳು ಎರಡೇ! ಶರೀರದಿಂದ ದುಡಿಯುವ ಅರಸಿಕ, ಕಲಾಹೀನ ಹಾಗೂ ಮಂದಬುದ್ಧಿಗಳಾದ ಜನರದೊಂದು, ಬುದ್ಧಿಯಿಂದ ಜೀವಿಸುವ ರಸಿಕ, ಕಲಾಸಂಪನ್ನ ಹಾಗೂ ಪ್ರತಿಭಾವಂತರಾದ

ಜನರದಿನ್ನೊಂದು. ಉಳಿದೆಲ್ಲ ಜಾತಿಗಳು ಒಂದುವೇಳೆ ಮುರಿದುಹೋಗಬಹುದು. ಆದರೆ ಈ ಎರಡು ಜಾತಿಗಳ ನಡುವಿನ ಅಂತರವು ಎಂದೂ ಕಡಿಮೆಯಾಗುವದಿಲ್ಲ. ವತ್ಸಲೆ ಒಂದು ಜಾತಿಯವಳು, ನಾನು ಇನ್ನೊಂದು ಜಾತಿಯವನು. ಹಿರಿಯರ ಹಟದಿಂದಲೂ ಬ್ರಾಹ್ಮಣರು ಬಟಗುಟ್ಟಿದ ಮಂತ್ರಗಳಿಂದಲೂ ಜನರು ಒಗೆದ ಅಕ್ಷತೆಗಳಿಂದಲೂ ಇಷ್ಟು ಭಿನ್ನಪ್ರಕೃತಿಯ ಜನರು ಏಕರೂಪವಾಗುವರೇ? ಇದನ್ನೆಲ್ಲ ವತ್ಸಲೆಗೆ ಬಾಯಿಂದ ಹೇಳಲಿಕ್ಕೆ ಬರುವದಿಲ್ಲವೆಂದು ಮನಸ್ಸಿನೊಳಗಿನ ವಿಚಾರಗಳನ್ನು ಕಾಗದದ ಮೇಲೆ ಇಳಿಸತೊಡಗಿದೆ. ಈ ವಹಿಯನ್ನು ಒಮ್ಮೆ ವತ್ಸಲೆಯ ಮೈಮೇಲೆ ಒಗೆದೆನೆಂದರೆ ಪಾರಾದೆ. ಇಷ್ಟು ಸಾದ್ಯಂತವಾದ ಲೇಖೀ ಪ್ರಮಾಣವನ್ನು ನೋಡಿದ ಮೇಲೆ ಅವಳ ಮನೋದೇವತೆ ಕೂಡ ನನಗೆ ದೋಷಿಯೆಂದು ಗೊತ್ತುಪಡಿಸಲಾರದು. ನಾನು ಹುಟ್ಟಾ ಹೂವಿನಿಂದ ಹೂವಿಗೆ ಹಾರಾಡುತ್ತ ಹೋಗುವ ಪಾತರಗಿತ್ತಿಯಾಗಿದ್ದೇನೆ. ದೀಪಕ್ಕೆ ಮುಗಿಬಿದ್ದು ಸುಟ್ಟುಹೋಗುವ ಹುಳದ ಜನ್ಮವನ್ನು ಸೃಷ್ಟಿಯು ಅವಳಿಗೆ ಕೊಟ್ಟಿದೆ. ಈ ದೋಷವು ಯಾರದು? ನನ್ನದಲ್ಲವೇ ಅಲ್ಲ'

ವತ್ಸಲೆಯು ಆ ವಹಿಯನ್ನು ದೂರ ಬಿಸುಡಿದಳು. ಆದರೆ ಅಷ್ಟರಿಂದಲೇ ತನ್ನ ಅಂತಃಕರಣದಲ್ಲಿ ಅವಳು ಹೊತ್ತಿಸಿದ ಉರಿಯು ಕಡಿಮೆಯಾಗುವದೆಂತು? ಅವಳ ಕಣ್ಣಿಂದ ನೀರು ಹರಿಯಹತ್ತಿದವು. ಅದರಿಂದ ಆ ಉರಿಯು ಆರುವದರ ಬದಲು ಇನ್ನೂ ಹೆಚ್ಚು ಹೊತ್ತಿಕೊಂಡಿತು. ಕಂಬನಿ ಒರಸಲಿಕ್ಕೆ ಯಾರಾದರೂ ಇದ್ದರೇ ಅಳುವದರಲ್ಲಿ ಆನಂದವಿರುತ್ತದೆ. ಗಲ್ಲಿನ ಹಲಗೆಯ ಮೇಲೆ ನಿಂತ ಆರೋಪಿಯ ದೃಷ್ಟಿಯಿಂದ ಅವಳು ಎಲ್ಲಕಡೆ ನೋಡಿದಳು. ರಮಾಕಾಂತನ ಕೋಣೆಯಲ್ಲಿ ಚಿತ್ರಪಟ ತಾರಕೆಗಳು ಹೊಳೆಯುತ್ತಿದ್ದವು. ಚಿತ್ರದಲ್ಲಿಯ ನಾಯಕ-ನಾಯಿಕೆಯರು ಚುಂಬನಕ್ಕಾಗಿ ಆತುರರಾಗಿದ್ದರು. ಅವಳಿಗೆನಿಸಿತು—ಒಂದು ಸುತ್ತಿಗೆ ತೆಗೆದುಕೊಂಡು ಒಂದರ ಹಿಂದೊಂದು ಎಲ್ಲ ಫೋಟೋಗಳನ್ನು ಒಡೆದುಹಾಕಬೇಕು.

ಅವಳ ತಲೆಯಲ್ಲಿ ಬಿರುಗಾಳಿ ಹುಚ್ಚೆದ್ದು ಕುಣಿಯುತ್ತಿತ್ತು. ರಮಾಕಾಂತನ ಹಾದಿ ಜುಹೂದ ಕಡೆಗೆ! ತನ್ನದು ಅದಕ್ಕಿಂತ ಬೇರೆ. ಅಂದರೆ ಯಾವದು? 'ಮಹಾಲಕ್ಷ್ಮಿ'ಯದೇ? ನಾಳೆ ಮಹಾಲಕ್ಷ್ಮಿಯು ಬಳಿಯ ಸೀರಲ್ಲಿ ಮುಳುಗಿದ ಒಬ್ಬ ಹೆಂಗಸಿನ ಹೆಣವು ಸಿಗಬೇಕೆಂದೇ ನಾನು ಜನ್ಮಕ್ಕೆ ಬಂದದ್ದು? ರಮಾಕಾಂತ ಪಾತರಗಿತ್ತಿ! ತಾನು ಪತಂಗ! ಪಾತರಗಿತ್ತಿಯು ಬಣ್ಣ ಚಂದ ಕಾಣುತ್ತದೆ. ಆದರೆ ಪತಂಗವೂ ತನ್ನ ರೀತಿ ಯಿಂದ ಚಂದ ಕಾಣುವದಿಲ್ಲವೇ? ಯಾವದೋ ಒಂದು ಗಾಳಿಗೆ ಒಂದು ದೀವಿಗೆ ಹೊತ್ತಿಕೊಳ್ಳುವದರಲ್ಲಿದೆ—ಅದು ಹೊತ್ತಿದರೆ ಒಂದೇ ಮನೆ ಯಲ್ಲಿ ಇಡೀ ಊರು ಸುಟ್ಟು ಕರಿಕಾಗಬಹದು—ಇಂಥ ದೀವಿಗೆಗೆ ಪತಂಗವು ತೆಕ್ಕೆಬಿದ್ದು ಅದನ್ನು ಆರಿಸಿಬಿಡುತ್ತದೆ. ಅದು ಸುಟ್ಟು ಹೋದರೂ ಇಡೀ ಊರಿಗೆ ಅದು ಜೀವದಾನ ಕೊಟ್ಟಂತಲ್ಲವೇ? ಬಣ್ಣದ ಪಾತರಗಿತ್ತಿ ಬರೀ ಕುಣಿಯಬೇಕು, ಸೋಗು ಮಾಡಬೇಕು. ಆದರೆ ಈ ಜೀವದಾನ ಕೊಡುವ ಕೆಲಸ....ಸಕಾಶದಲ್ಲಿ ಇಡೀ ಪೃಥ್ವಿಯು ಕಾಣು ವಂತೆ ಅವಳ ವ್ಯಾಕುಲವಾದ ಹೃದಯವು ಅವಳ ಸ್ಮೃತಿಪಟಲದ ಮೇಲೆ ಅವಳ ಹಿಂದಿನ ಆಯುಷ್ಯದ ಚಿತ್ರವನ್ನೆಲ್ಲ ಬರೆದು ತೋರಿಸಿತು. ತಾನು ಹುಟ್ಟಿದಂದಿನಿಂದ ನಿರ್ಭಾಗ್ಯಳು! ತಾಯಿ ಚಿಕ್ಕಂದಿನಲ್ಲಿಯೇ ತೀರಿ ಕೊಂಡಳು. ತಂದೆ ಪರೋಪಕಾರ ಮಾಡುತ್ತ ಮಾಡುತ್ತ ಕೆಲಸವನ್ನು ಕಳೆದುಕೊಂಡು ಕುಳಿತರು. ಹೊಟ್ಟೆಗಾಗಿ ಅವರು ಕೊಂಕಣದಿಂದ ಮುಂಬೈಗೆ ಬಂದು ಅಲ್ಲಿ ಇನ್‌ಫ್ಲುಯೆಂಝಾ—ರೋಗಿಗಳ ಶುಶ್ರೂಷೆ ಮಾಡುವಾಗ ತಾವೂ ಅದೇ ಪಿಡುಗಿಗೆ ಬಲಿಯಾದರು. ತಾನು ಬಾಲ್ಯದ ಐದಾರು ವರ್ಷಗಳನ್ನೇನೋ ರಮ್ಯವಾದ ಕೊಂಕಣದಲ್ಲಿಯೂ ಅದಕ್ಕೂ ರಮ್ಯವಾದ ತಂದೆಯವರ ಸಹವಾಸದಲ್ಲಿ ಕಳೆದಳು. ಅಲ್ಲಿಂದ ಸಾಂಗಲಿ ಯಲ್ಲಿ ಸೋದರಮಾವನ ಮನೆಯಲ್ಲಿ ಕಳೆದ ಹದಿನಾಲ್ಕು ವರ್ಷಗಳು! ಪೂರಾ ವನವಾಸವೇ ಅನ್ನಬೇಕು! ಸುರೂಪಿಗಳಾದ ಮಾವನ ಹೆಣ್ಣು ಮಕ್ಕಳ ಬಿಗುವು, ಸೋದರತ್ತೆಯ ಹೊಟ್ಟೆಯುರಿ, ಹೆಂಡತಿಯ ಕೈಗೊಂಬೆಯಾಗಿದ್ದ ತನ್ನ ಮಾವ ಡಾಕ್ಟರನು ತನ್ನ ಕೊರಳಿಗೆ ಕಟ್ಟಿದ

ಅಡಿಗೆ–ಕೆಲಸ, ಹುಡುಗರ ಶಾಲೆಯಲ್ಲಿ ಮೊದಲನೆಯ ನಂಬರು ಪಡೆದರೂ ಮ್ಯಾಟ್ರಿಕ್ ಕ್ಲಾಸಿನಲ್ಲಿದ್ದಾಗ ಬೇನೆಬಿದ್ದದ್ದರಿಂದ ತಾನು ಶಾಲೆ ಬಿಡ ಬೇಕಾದ ಪ್ರಸಂಗ–ದೈವವು ತನ್ನ ದುಃಖದ ಗುಡಿಯನ್ನೇ ಕಟ್ಟುತ್ತಿತ್ತು. ಅದರ ಮೇಲೆ ರಮಾಕಾಂತನ ರೂಪವು ಕಳಸವನ್ನು ಇಟ್ಟಿತು. ನಿಜವಾಗಿ ಆ ಗುಡಿಗೆ ಶೋಭಿಸುವಂಥ ಕಳಸವೇ ಅದು!

ಇದೇ ವೇಳೆಗೆ ಎದುರಿನ ಬಂಗಲೆಯಲ್ಲಿಯ ಸಂಗೀತ ಕೂಟವನ್ನು ಮುಗಿಸಿಕೊಂಡು ಜಹಾಗಿರದಾರರ ಸವಾರಿಯು ಮೋಟರಿನಲ್ಲಿ ಕೂಡ ಲಿಕ್ಕೆಂದು ಹೊರಗೆ ಬಂದಿತು. ಬಂಗಲೆಯ ಯಜಮಾನಿತಿಯೂ ಸಿಂಗಾ ರಾಗಿ ಅವರೊಡನೆ ಸೋಗಿನಿಂದ ನಡೆಯುತ್ತಿದ್ದಳು. ಕಲೆ ಮತ್ತು ಸೌಂದರ್ಯ–ರಮಾಕಾಂತನು ಯಾವದರ ಸಲುವಾಗಿ ತನ್ನ ಜೀವವನ್ನು ನಿವಾಳಿಸಿ ಒಗೆಯಲಿಕ್ಕೆ ಸಿದ್ಧನಾಗಿದ್ದನೋ ಆ ಕಲಾ–ಸೌಂದರ್ಯಗಳು ಕೈಯಲ್ಲಿ ಕೈ ಹಾಕಿಕೊಂಡು ಎದುರಿನ ಬಂಗಲೆಯಲ್ಲಿ ಕುಣಿಯುತ್ತಿದ್ದವು. ಆದರೆ ವತ್ಸಲೆಗೆ ಅವುಗಳ ಹೇಸಿಕೆ ಬಂದಿತು. ಅವಳು ಮೋರೆ ತಿರುವಿದಳು. ಒಕ್ಕಲಿಗರ ಯಾವ ಕಪ್ಪು–ಕರೇ ಹೆಂಗಸರನ್ನು ರಮಾಕಾಂತನು ನಿಂದಿ ಸಿದ್ದನೋ ಅವರು ಈ ಹೆಂಗಸಿಗಿಂತ ನೂರು ಪಾಲಿಗೆ ಬೇಕೆಂದು ಅವಳಿ ಗೆನಿಸಿತು. ಅವಳ ಮನಸಿನಲ್ಲಿ ಬಂದಿತು–ಮಕ್ಕಳುಮರಿಗಾಗಿಯೂ ಕುಟುಂಬಕ್ಕಾಗಿಯೂ ಬಿಸಿಲು ನೆರಳೆನ್ನದೆ ದುಡಿದು ಕಪ್ಪಾದ ಆ ಹೆಂಗಸರ ಜೀವನದಲ್ಲಿ ಇದ್ದ ಸೌಂದರ್ಯವು, ದುಡ್ಡಿನ ಆಶೆಗಾಗಿ ನರ ಪಶುವಿನೊಡನೆ ಬೆಳದಿಂಗಳಲ್ಲಿ ಮೋಜು ಮಾಡಲಿಕ್ಕೆ ಹೋಗುವ ಈ ವೇಶ್ಯೆಯ ಆಯುಷ್ಯದಲ್ಲಿರುವದೇ? ನಿಶ್ಚಯವಾಗಿಯೂ ಇಲ್ಲ! ಪ್ರೇಮ ವನ್ನು ದಾನ ಮಾಡಬಹುದು. ಆದರೆ ಮಾರಾಟವೇ? ಛೇ! ಹೊಟ್ಟೆ ಯಿಂದ ಹುಟ್ಟಿದ ಮಕ್ಕಳ ಮಾರಾಟದಷ್ಟೇ ಅದು ಅಮಂಗಲವಾದೀತು.

ಅವಳ ಕೈಯು ರಮಾಕಾಂತನ ಟೇಬಲ್ಲ ಮೇಲಿನ ವರ್ತಮಾನ ಪತ್ರಗಳನ್ನು ತಿರುವಿಹಾಕುತ್ತಿತ್ತು. ಸಹಜವಾಗಿ ಒಂದು ವರ್ತಮಾನ ಪತ್ರವನ್ನೆತ್ತಿ ಅವಳು ನೋಡತೊಡಗಿದಳು. ಅದು ಎಂಟು ಹತ್ತು ದಿವಸದ ಹಿಂದಿನ 'ಬಕುಲ'ದ ಸಂಚಿಕೆಯಿತ್ತು. ಅದರಲ್ಲಿ ಒಂದು ಜಾಹೀರಾತು ಅವಳ ದೃಷ್ಟಿಗೆ ಬಿತ್ತು. 'ಬೇಕು—'

ಮಾಸ್ತರಿಣಿಯ ಜಾಹೀರಾತು ಇರಬಹುದು ಒಮ್ಮೆ-ಆದರೆ ತಾನೆಲ್ಲಿ ಮ್ಯಾಟ್ರಿಕ್ ಪಾಸಾಗಿರುವಳು?

'ನಮ್ಮ ಕಾಮಾಪುರದ ಕೇರುಹಣ್ಣಿನ ಕಾರಖಾನೆಯಲ್ಲಿ ಸದ್ಯಕ್ಕೆ ಐನೂರು ಜನ ಕೂಲಿಯವರು ಕೆಲಸ ಮಾಡುತ್ತಿದ್ದಾರೆ. ಆದರೆ ಆಫ್ರಿಕೆ ಯಲ್ಲಿ ಕೇರು ಹಣ್ಣು-ಕೂಲಿ ಇವೆರಡೂ ಅಗ್ಗವಾಗಿರುವದರಿಂದ ಅಲ್ಲಿಯ ಮಾಲು ಇಂಗ್ಲಂಡ-ಅಮೇರಿಕೆಗಳಲ್ಲಿ ಹೆಚ್ಚಾಗಿ ಖರ್ಚಾಗಹತ್ತಿದೆ. ನಾವು ಪ್ರಯತ್ನ ಮಾಡದಿದ್ದರೆ ಪರದೇಶದ ಹಣವನ್ನು ಸ್ವದೇಶಕ್ಕೆ ತರುವ ಈ ಉದ್ಯೋಗವು ನಾಮಶೇಷವಾಗಬಹುದು. ಅದನ್ನು ಉಳಿಸಿಕೊಳ್ಳಲಿಕ್ಕೆ ಒಂದೇ ಒಂದು ಉಪಾಯವಿದೆ. ಅದೆಂದರೆ ಕೇರುಹಣ್ಣು ಸುಲಿಯುವ ಯಂತ್ರವನ್ನು ತಯಾರಿಸುವದು. ಕೈಯಿಂದ ಸುಲಿದ ಗೊಡಂಬಿಯಷ್ಟೇ ಚೆನ್ನಾದ ಮಾಲು ಯಂತ್ರದಿಂದ ತಯಾರಾಗತೊಡಗಿದರೆ ಆಫ್ರಿಕದಲ್ಲಿಯ ಕಾರಖಾನೆಗಳಿಗೆ ಎದುರುಕೊಟ್ಟು ಕೊಂಕಣವಲ್ಲಿಯ ಈ ಉದ್ಯೋಗವು ಬದುಕಬಹುದು. ಯಂತ್ರವನ್ನು ಯಶಸ್ವಿಯಾಗಿ ಸಿದ್ಧಪಡಿಸಿದವನಿಗೆ ನಾವು ಐದು ಸಾವಿರ ರೂಪಾಯಿಗಳ ಇನಾಮು ಕೊಡುವೆವು. ಆದರೆ ಈ ದ್ರವ್ಯಪ್ರಾಪ್ತಿಗಿಂತ ಅವನಿಗೆ ಶೋಧಕನೆಂದು ದೊರೆಯುವ ಕೀರ್ತಿಯು ಹೆಚ್ಚು ಮಹತ್ವದ್ದಾಗಿದೆ. ಅಮೇರಿಕದಲ್ಲಿ ಇಂಥ ಯಂತ್ರಗಳನ್ನು ತಯಾ ರಿಸುವ ಯತ್ನವು ನಡೆದಿದೆಯೆಂದು ಹೇಳುತ್ತಾರೆ. ಆದರೂ ಇಂದಿನ ವರೆಗೆ ಆ ಯತ್ನಕ್ಕೆ ಯಶಸ್ಸು ಸಿಕ್ಕಿಲ್ಲ. ಈ ವಿಷಯದಲ್ಲಿ ಪ್ರಯತ್ನ ಮಾಡಿ ನೋಡಬೇಕೆಂದು ಇಚ್ಛಿಸುವ ಯಂತ್ರಶಾಸ್ತ್ರಜ್ಞನಿಗೆ ಅವಶ್ಯ ವಿದ್ದಷ್ಟು ದಿವಸ ಹತ್ತಾನ ಎಲ್ಲ ಖರ್ಚು ನಡೆಯಿಸಲಿಕ್ಕೆ ಈ ಕಾರ ಖಾನೆಯು ಸಿದ್ಧವಿದೆ. ಎಷ್ಟೋ ಜನರಿಗೆ ಕೊಂಕಣದ ಬಗ್ಗೆ ಏನೂ ಗೊತ್ತಿರುವದಿಲ್ಲ. ಆದರೂ ಇತ್ತ ಕಡೆಗೆ ಬರುವ ಇಚ್ಛೆಯುಳ್ಳವರು ನನ್ನ ಮಗಳಾದ ಸುಲೋಚನೆ ಎಂಬವಳಿಗೆ ಕೆಳಗಿನ ಪತ್ತೆಯ ಮೇಲೆ ಭೆಟ್ಟಿಯಾಗಬೇಕು.

ಪತ್ತೆಯನ್ನು ಓದದೆಯೆ ವತ್ಸಲೆಯು ಆ ಜಾಹಿರಾತನ್ನು ಒಮ್ಮೆ, ಎರಡು ಸಾರೆ, ಮೂರು ಸಾರೆ ಓದಿದಳು. ಮೂರನೇ ಸಾರೆ ಓದಿ

ಮುಗಿಸಿದ ಕೂಡಲೆ ಅವಳು ಒಮ್ಮೆಲೆ ಎದ್ದಳು. ಮೊದಲು ದೂರ ಒಗೆದ ರಮಾಕಾಂತನ ವಹಿಯನ್ನು ತೆಗೆದುಕೊಂಡಳು; ಬೀದಿಯಲ್ಲಿ ಏನಾದರೂ ಬಾರಿಸುತ್ತ ಬಂದರೆ ಅದನ್ನು ನೋಡಲಿಕ್ಕೆ ಓಡಿ ಹೋಗುವ ಹುಡುಗರಂತೆ ಲಗುಬಗೆಯಿಂದ ಜಿನೆಯಿಂದಿಳಿದು ಅವಳು ಕೆಳಗೆ ಬಂದಳು. ಬಾಗಿಲಲ್ಲಿ ಗೊರಕೆ ಹೊಡೆಯುತ್ತ ಬಿದ್ದುಕೊಂಡ ಕೆಲಸದ ಹುಡುಗನು ಅರ್ಧ ಮರ್ಧ ಕಣ್ಣು ತೆರೆದು ನೋಡಿ ಮಗ್ಗುಲಾದನು. ರಮಾಕಾಂತನು ತಿರುಗಿ ಬಂದದ್ದರಿಂದ ಬಾಯಿಯವರು ಬಾಗಿಲು ತೆರೆದರೆಂದು ಅವನಿಗೆನಿಸಿತು.

* * * *

ಆಬಚಿಯ ಮನೆಯ ಇತ್ತ ಕಡೆಯ ಮೂಲೆಗೇ ಬಾಪ್ಪಾ ಅವರು ನಿಂತಿದ್ದರು. ಅವರನ್ನು ನೋಡುತ್ತಲೇ ಸುಲೋಚನೆಯು ಚಟ್ಟನೆ ಮೋಟರು ನಿಲ್ಲಿಸಿದಳು. ತಾನು ಕಾಲ್ನಡೆಯಿಂದಲೇ ಮನೆಗೆ ಹೋಗುವೆ ನೆಂದು ರಮಾಕಾಂತನೆಂದದ್ದರಿಂದ ಮೋಟರು ಹೊರಟು ಹೋಯಿತು.

ಮೋಟರಿನಿಂದ ಇಳಿಯುತ್ತಲೇ ಕ್ಷಣಾರ್ಧದಲ್ಲಿ ರಮಾಕಾಂತನ ಮನಸ್ಸು ಬಾಪ್ಪಾ ಅವರ ಛಾಯಾಚಿತ್ರವನ್ನು ತೆಗೆದುಕೊಂಡಿತು. ಸ್ವಾರಿಯು ಹೇಳಕೂಡದಷ್ಟು ಬಡಕಾಗಿತ್ತು. ಒಂದೊಂದು ಪ್ರಸಂಗ ದಲ್ಲಿ ವಂದನೆಗೆ ಧ್ವಜವು ಇಲ್ಲದಿದ್ದರೆ ಇವರ ತಲೆಗೇ ಒಂದು ತ್ರಿವರ್ಣದ ಅರಿವೆಯನ್ನು ಕಟ್ಟಿ ಧ್ವಜವಂದನವನ್ನು ಮಾಡಿದರೂ ನಡೆಯುವಂತಿತ್ತು. ಒಣ್ಣ ಕಪ್ಪಿನ ಮೇಲೆಯೆ. ಗಲ್ಲದ ಎಲುವುಗಳಂತೆ ಮುಂದಿನ ಎರಡು ಹಲ್ಲುಗಳೂ ಮೇಲೆ ಎದ್ದಿದ್ದವು. ಖಾದಿಯ ಪಂಜೆ ಮೊಳಕಾಲ ಕೆಳಗೆ ಒಂದೆರಡು ಬೊಟ್ಟು ಇತ್ತೋ ಇಲ್ಲವೊ. ತಲೆಗೆ ಸಮನಾಗಿ ಕೂದಲು ಕತ್ತರಿಸಿ ಬಿಟ್ಟದ್ದರಿಂದ ತಲೆಯು ಒಂದು ಬೋಳು ಬಂಡೆಯಂತೆ ತೋರು ತ್ತಿತ್ತು. ಮೈಮೇಲಿನ ಖಾದಿಯ ಚಾದರವನ್ನು ಮಾತ್ರ ಭುಜದ ಹತ್ತರ ಎರಡೂ ಕೈಗಳಿಂದ ಅವರು ಗಟ್ಟಿಯಾಗಿ ಹಿಡಿದುಕೊಂಡಿದ್ದರು.

ಅವರು ಸುತ್ತಿಕೊಂಡ ಚಾದರವನ್ನು ನೋಡುತ್ತಲೆ ರಮಾ ಕಾಂತನಿಗೆನಿಸಿತು—ಎಂಥ ಹುಚ್ಚ ಗೃಹಸ್ಥನಿವನು. 'ಒಳ್ಳೇ ಸ್ವೆಟರಗಿಟರ ಜಟ್ಟು—'

ಆದರೆ ಕೂಡಲೇ ಸುಲೋಚನೆಯು ಹೇಳಿದ ಅವರ ಇತಿಹಾಸವು ನೆನಪಾಯಿತು. ಟಿಳಕರಿಗೆ ರಾಜದ್ರೋಹಕ್ಕಾಗಿ ಶಿಕ್ಷೆಯಾದಾಗ ಇವರು ಸರಕಾರೀ ಕಾಲೇಜಿನಲ್ಲಿ ಪ್ರೋಫೆಸರರಾಗಿ ಆರೇ ತಿಂಗಳಾಗಿತ್ತು. ಸ್ವಾರಿಯು ಒಮ್ಮೆಲೇ ನೌಕರಿಯನ್ನು ಬಿಟ್ಟುಕೊಟ್ಟಿತು. ಮೊದ ಮೊದಲು ಹೆಣ್ಣು ತಾವಾಗಿ ಬರುವ ಕಾಲದಲ್ಲಿ ಇವರು ಒಳ್ಳೇ ಚಮತ್ಕಾರ ರೀತಿಯಿಂದ ಗಟ್ಟಿಗರಾದ ವಧೂ-ಪಿತರರನ್ನು ತಿರುಗಿ ಕಳುಹುತ್ತಿದ್ದರು. ವಯಸ್ಸಿನಿಂದ ಚಿಕ್ಕ ಹುಡುಗಿ ಬಂದರೆ 'ನನಗೆ ಸ್ವಲ್ಪ ದೊಡ್ಡವಳು ಬೇಕು' ಎನ್ನುತ್ತಿದ್ದರು. ಆಗ ದೊಡ್ಡ ಹುಡಿಗೆಯರು ಬಹಳ ದೊರೆಯುತ್ತಲೇ ಇದ್ದಿಲ್ಲ. ಅದರಲ್ಲಿ ಬಾರದೇಶಕರ ಪಂಥದಲ್ಲಿಯಂತೂ ತೀರ ವಿರಳ. ಅಂಥವರಲ್ಲಿಯೂ ಒಬ್ಬ ದೊಡ್ಡ ಹುಡುಗಿ ಬಂದರೆ 'ನನಗೆ ಸ್ವಲ್ಪು ಸಣ್ಣವಳು ಬೇಕು' ಎಂಬ ಮಂತ್ರವನ್ನು ಬಾಪ್ಪಾ ಅವರು ಉಚ್ಚರಿಸಿದರೆಂದೇ ತಿಳಿಯಬೇಕು.

ಈ ತಪ್ಪಿಸಾಟವು ಬಹುದಿವಸ ನಡೆಯಲಿಲ್ಲ. ಆಗ ಇವರು ಮತ್ತೊಂದು ಉಪಾಯವನ್ನು ಹುಡುಕಿದರು. ನನ್ನ ಲಗ್ನ ಆಗಿದೆ ಎಂದು ಜನರಿಗೆ ಹೇಳಹತ್ತಿದರು. 'ಹೆಂಡತಿ ಎಲ್ಲಿದ್ದಾಳೆ?' ಎಂದು ಯಾರಾದರೂ ದಿಟ್ಟತನದಿಂದ ಕೇಳುತ್ತಿದ್ದರು.

'ಇಂಗ್ಲಂಡಿನಲ್ಲಿ!'

'ತಿರುಗಿ ಎಂದು ಬರುವರು?'

'ನೋಡೋಣ. ನೀವು ಕರೆತಂದಾಗಲೇ ಬರುವರು!'

'ಹೋಗಿ ಎಷ್ಟು ದಿವಸವಾಯಿತು?'

'ನೂರು ವರ್ಷಗಳಾದರೂ ಆಗುತ್ತ ಬಂದವು'

'ಅಂದರೆ?'

'ನನ್ನ ಹೆಂಡತಿಯ ಹೆಸರು ಹೇಳಲೇ? ಸ್ವತಂತ್ರತೆ!'

ಲಗ್ನದಂತೆಯೇ ಊಟ ಮೊದಲಾದ ಪ್ರತಿಯೊಂದು ಮಾತಿನಲ್ಲಿಯೂ ಅವರು ವಿಲಕ್ಷಣ ನಿಗ್ರಹಿಗಳಾಗಿದ್ದರು. ಬಣ ಆಕ್ಕಿ ಬೇಳೆಗಳ ಮೇಲೆಯೆ ತಿಂಗಳಾನುತಿಂಗಳೆಲ್ಲ ಇರುವ ಪ್ರಯತ್ನವನ್ನೂ ಅವರು

ಮಾಡಿದ್ದರು. ೧೯೩೦ನೇ ಇಸ್ವಿಯ ಕಾಯದೆಭಂಗ ಚಳವಳಿಯಲ್ಲಿ ಅವರು ಜೇಲಿಗೆ ಹೋದರು. ಹೋದ ಕೂಡಲೆ ಭಂಗೀ ಕೆಲಸವನ್ನು ಬೇಡಿದರು. ಬಿಡುಗಡೆಯಾಯಿತು. ಬಿಟ್ಟ ಕೂಡಲೆ ಮತ್ತೆ ಕಾಯದೆಬಂಗ—ತುರಂಗ ಹಾಗೂ ಭಂಗೀ ಕೆಲಸ.

ಇದೆಲ್ಲವನ್ನು ನೆನಪುಮಾಡಿಕೊಂಡೂ ಎದುರಿನಲ್ಲಿ ಆ ಮೂರ್ತಿಯನ್ನು ನೋಡಿಯೂ ರಮಾಕಾಂತನು ಕ್ಷಣಹೊತ್ತು ಗಪ್ಪುಗಾರಾದನು. ಅವನು ನಮಸ್ಕಾರ ಮಾಡಿದ. ಬಾಪ್ಪಾ ಅವರು 'ವಂದೇ ಮಾತರಮ್' ಎಂದು ಅವನನ್ನು ಬರಮಾಡಿಕೊಂಡರು.

ರಮಾಕಾಂತನನ್ನು ತೋರಿಸುತ್ತ ಸುಲೋಚನೆಯೆಂದಳು 'ಇವರೇ ಆ ಪ್ರಸಿದ್ಧ ಕಥಾಲೇಖಕರಾದ ರಮಾಕಾಂತರು'

'ಹೀಗೋ. ಮಹಾರಾಷ್ಟ್ರದ ಭಾವೀ 'ಗಾರ್ಕಿ'. ಸುಲೂ, ನಿನ್ನ ಹತ್ತಿರ ಏನೋ ಜಾದು ಇದ್ದ ಹಾಗಿದೆ. ವಿದ್ಯಾಧರ, ರಮಾಕಾಂತ, ನೀನು— ಹೀಗೆ ದೇಶದ ಆಧಾರಸ್ತಂಭಗಳೆಲ್ಲ ಒತ್ತಟ್ಟಿಗೆ ಕೂಡಿದರೆ ಮೇಲಿನ ಮಂದಿರವು ನೀಟಾಗಿ ನಿಲ್ಲಬಹುದೇ?'

'ನಮ್ಮ ಬಾಪ್ಪಾ ಅವರೇನು ಅರಸಿಕರಲ್ಲ ಅಂ—. ನೋಡಿರಿ ಎಷ್ಟು ಮೋಜು ಮಾತಾಡುತ್ತಾರೆ' ಎನ್ನುವ ದೃಷ್ಟಿಯಿಂದ ಸುಲೋಚನೆಯು ರಮಾಕಾಂತನನ್ನು ನೋಡಿದಳು.

'ಇಂದಿನ ಚಿತ್ರಪಟ ಚೆನ್ನಾಗಿತ್ತೆ?' ರಮಾಕಾಂತ ಕೇಳಿದ.

'ನೆಟ್ಟಗಿತ್ತು. ಆದರೇನು ಅಲ್ಲಿಂದಿಲ್ಲಿಗೆ ಬರೀ ಕರುಣರಸ!'

ಕರುಣರಸದ ಒಳ್ಳೇ ಚಿತ್ರಪಟ! ರಮಾಕಾಂತನಿಗೆ ಒಂದು ವಿದೇಶೀ ಚಿತ್ರದ ನೆನಪಾಯಿತು. ಹೋದ ವಾರದಲ್ಲಿಯೇ ತಾನು ಅದನ್ನು ನೋಡಲಿಕ್ಕೆ ಸುರಂಗೆಯನ್ನು ಕರೆದುಕೊಂಡು ಹೋಗಿದ್ದ. ಅದರ ಕಥೆಯು ಸರ್‍ರನೆ ಅವನ ಕಣ್ಣಮುಂದೆ ಹಾಯ್ದುಹೋಯಿತು. ಒಬ್ಬ ಕುಮಾರಿಕೆಗೆ ಕೂಸು ಹುಟ್ಟುತ್ತದೆ. ಅದನ್ನು ಒಬ್ಬ ಮಕ್ಕಳಿಲ್ಲದ ಗೃಹಸ್ಥನ ಬಾಗಿಲಲ್ಲಿ ಅವಳು ಒಯ್ದು ಇಡುತ್ತಾಳೆ. ಮಗನ ಮೋರೆ ಯಾವಾಗಲೂ ದೃಷ್ಟಿಗೆ ಬೀಳುತ್ತಿರಬೇಕೆಂದು ಅವಳು ಅದೇ ಮನೆಯಲ್ಲಿ ಅಡಿಗೆಯವಳೆಂದು

ಇರಹತ್ತುತ್ತಾಳೆ. ಮುಂದೆ ಆ ಹುಡುಗನು ಬೇಸೆಬೀಳುವನು. ಸಿಕ್ಕದ್ದನ್ನು ತಿನ್ನಲಿಕ್ಕೆ ಬೇಡುತ್ತಾನೆ. ಆದರೆ ಪ್ರೇಮದಿಂದ ಅವಳು ಅವನ ಅವಿಚಾರದ ಬೇಡಿಕೆಗಳನ್ನು ಪೂರೈಸುವದಿಲ್ಲ. ಸಿಟ್ಟಿಗಾದ ಮೇಲೆ ಆ ಹುಡುಗನು ಅವಳ ಮೇಲೆ ತುಡುಗಿನ ಆರೋಪ ಹೊರಿಸಿ ಅವಳನ್ನು ಪೋಲೀಸರ ಕೈಯಲ್ಲಿ ಕೊಡುತ್ತಾನೆ. ಪೋಲೀಸರು ಹಿಡಿದುಕೊಂಡು ಹೋಗುವಾಗ 'ಮಾಯ ಡಿಯರ' ಎಂಬ ಎರಡೇ ಶಬ್ದಗಳನ್ನುಚ್ಚರಿಸಿ ಅವಳು ಕರುಣದೃಷ್ಟಿಯಿಂದ ತಿರುವಿದ ಗೋಣು—ಆ ಹೊತ್ತಿಗೆ ಸುರಂಗೆಯ ಗಲ್ಲದ ಮೇಲೆ ಹರಿದ ಕಣ್ಣೀರ ಸೆಳವಾಗಿ ರಮಾಕಾಂತನು ಚಟ್ಟನೆ 'ಆ ತಾಯಿ ಜನರ ಕಣ್ಣೀರು ತೆಗಿಸಿಯೇ ಬಿಡತಾಳೆ' ಎಂದ.

'ತಾಯಿಯಷ್ಟೇ ಯಾಕೆ? ಎಲ್ಲ ಮನುಷ್ಯರು!'

ರಮಾಕಾಂತನಿಗೆನಿಸಿತು—ಭಂಗೀ ಕೆಲಸ ಮಾಡುವ ಈ ದೇಶಭಕ್ತನಿಗೆ ಚಿತ್ರಪಟದಲ್ಲಿ ಏನು ತಲೆ ತಿಳಿಯುವದು? ಕೂಡಲೆ ಅವನಿಗೆ ಹೊಳೆಯಿತು—ಬಾಪ್ಪಾ ಅವರಂಥ ಮನುಷ್ಯರು ವಿದೇಶೀ ಚಿತ್ರಗಳನ್ನು ನೋಡಲಿಕ್ಕೆ ಹೋಗುವವರಲ್ಲ. ಯಾವದೋ ದೇಶೀಪಟವನ್ನು ನೋಡಿರಬಹುದು. ಮೆಲ್ಲಗೆ ಅವನು ಬಾಪ್ಪಾ ಅವರಿಗೆ ಕೇಳಿದ: 'ಚಿತ್ರ ದೇಶೀ ಇತ್ತು ಕಾಣುತ್ತದೆ?'

'ತೀರ ಶುದ್ಧ ದೇಶೀ! ಇಂಥ ಚಿತ್ರಪಟಗಳು ಪರದೇಶದಲ್ಲಿ ಆಗುತ್ತವೆಯೋ ಇಲ್ಲವೋ ಸಂಶಯವೇ!'

ರಮಾಕಾಂತ ಮನಸ್ಸಿನಲ್ಲಿಯೇ ಅಂದುಕೊಂಡ: 'ಸ್ವಾರೀ ಹುಟ್ಟಿದಾಗಿನಿಂದ ಇದೇ ಮೊದಲು ಕಾಣುತ್ತದೆ ಸಿನೇಮಾ ನೋಡಿದ್ದು!'

ಏನಾದರೂ ಮಾತಾಡಬೇಕೆಂದು ಕೇಳಿದ: 'ಎಷ್ಟು ಉದ್ದಾಗಿತ್ತು ಫಿಲ್ಮು?

'ಬಳ್ಳೇ ಎರಡು ಎರಡೂವರೆ ಮೈಲು!'

ಸುಲೋಚನೆಯು ಬೆಪ್ಪಾಗಿ ಬಾಪ್ಪಾ ಅವರ ಕಡೆಗೆ ನೋಡಹತ್ತಿದಳು. ರಮಾಕಾಂತನಿಗೆ ಮನವರಿಕೆಯಾಗಿಬಿಟ್ಟಿತು—ಜೇಲಿನಲ್ಲಿ ಎರಡು ಮೂರು ವರ್ಷ ಕಳೆದಿದ್ದರಿಂದ ಸ್ವಾರಿಯ ಸ್ಕ್ರೂ ಸಡಿಲಾಗಿದೆಯೆಂದು.

ಬಾಪ್ಪಾ ನಗುನಗುತ್ತ ಅಂದರು—'ನಿಮಗೂ ನೋಡಬೇಕಾಗಿದೆ ಯೇನು ಆ ಫಿಲ್ಮು?'

'ಈಗ ಹನ್ನೆರಡಕ್ಕೆ ಬಂದಾಗತದೆ ಸಿನೇಮಾ.'

'ಈ ಸಿನೇಮಾ ಹಾಗಿಲ್ಲ. ಇದು ಹತ್ತುಹನ್ನೊಂದು ಗಂಟೆಗೆ ಸುರುವಾಗಿ ಮುಂಜಾನೆ ಐದಾರು ಗಂಟೆಗೆ ಮುಗಿಯುವದು. ಇದು ನೋಡಿರಿ. ಅದರೊಳಗಿನದೊಂದು ಚಿತ್ರ. ನಿಂತಲ್ಲಿಯೇ ನಿಂತು ರಮಾಕಾಂತ ಸುಲೋಚನೆಯರು ಬಾಪ್ಪಾ ಅವರು ತೋರಿಸಿದ ಕಡೆಗೆ ನೋಡಿದರು. ಫುಟಪಾಥದ ಮೇಲೆ ಕೈಕಾಲು ಮುದುಡಿಕೊಂಡು ಒಬ್ಬ ಮನುಷ್ಯ ಮಲಗಿದ್ದ. ರಮಾಕಾಂತನ ಮನಸ್ಸಿನಲ್ಲಿ ಒಮ್ಮೆಲೆ ಪ್ರಕಾಶ ಬಿತ್ತು. ಈ ಗೃಹಸ್ಥನು ಸಿನೇಮಾಕ್ಕೆ ಹೋಗದೆ ಎರಡು ಎರಡುವರೆ ಮೈಲು ಫುಟಪಾಥದ ಮೇಲೆ ಎಷ್ಟು ಜನರು ಕಟಕಟ ನಡುಗುತ್ತ ಮಲಗಿರುವರೆಂಬದನ್ನು ನೋಡಿ ಬಂದಿರಬೇಕು.

ಬಾಪ್ಪಾ ಮುಂದೆ ಅಂದರು—'ಸಿನೇಮಾದಲ್ಲಿ ಒಳ್ಳೇ ಏರಿಕೆಯ ಪ್ರಸಂಗವಿರುತ್ತದಲ್ಲ? ಅದೂ ನನಗೆ ನೋಡಲಿಕ್ಕೆ ಸಿಕ್ಕಿತು.'

ಇಬ್ಬರೂ ಉತ್ಸುಕತೆಯಿಂದ ನೋಡಹತ್ತಿದರು.

'ಒಂದು ಮಾಟನ್ನ ಬಂಗಲೆಯಿಂದ ಒಬ್ಬ ಶ್ರೀಮಂತ ಗೃಹಸ್ಥ ತಿರುಗಿ ಹೋಗುತ್ತಿದ್ದ. ಅವನನ್ನು ಕಳಿಸಲಿಕ್ಕೆ ಹೆಣ್ಣುಮಗಳೊಬ್ಬಾಕೆ ಹೊರಗೆ ಬಂದಿದ್ದಳು. ಅವಳು ವೇಶ್ಯೆಯೇ ಇರಬಹುದು. ಮುಂದೆ ತುಸು ಹೊತ್ತಿನಲ್ಲಿಯೇ ಆ ಬಂಗಲೆಯ ಎದುರಿನ ಇಮಾರತಿಯೊಳಗಿಂದ ಒಬ್ಬ ಹೆಣ್ಣುಮಗಳು ಕೆಳಗೆ ಬಂದಳು. ಬೀದಿಯ ನಟ್ಟನಡುವೆ ನಿಂತು ಈಕೆ ಏನು ಮಾಡುತ್ತಿರುವಳೆಂಬದು ನನಗಂತೂ ತಿಳಿಯಲಿಲ್ಲ. ಅವಳೇನು ವಿಧವೆ ಇದ್ದಳೋ ಅಥವಾ ಉಪದ್ರವಕ್ಕೆ ಬೇಸತ್ತು ಜೀವಕೊಡಲಿಕ್ಕೆ ಹೊರಟಿದ್ದಳೊ—ಎಷ್ಟೊ ಹೊತ್ತು ಬೀದಿಯಲ್ಲಿ ನಿಂತು ಆ ಇಮಾರತಿಯ ಕಡೆಗೆ ನೋಡುತ್ತಿದಳು. ಪ್ರೇತಕ್ಕೆ ಬೆಂಕಿ ಹಚ್ಚುವ ಮುಂದೆ ಮನುಷ್ಯನು ಅದರ ಕಡೆ ಹೇಗೆ ನೋಡುತ್ತ ನಿಲ್ಲಬೇಕೋ ಹಾಗೆ—'

'ಮುಂದೆ ಎಲ್ಲಿ ಹೋದಳು ಅವಳು?' ಎಂದು ಸ್ವಲ್ಪ ಕಂಪಿತ ಸ್ವರದಿಂದ ರಮಾಕಾಂತ ಕೇಳಿದ.

'ತಿರುಗಿ ಆಕೆ ಮೇಲೆ ಹೋದಳು. ಅಂತೇ ನಾನು ತಿರುಗಿ ಬಂದೆ. ಇಲ್ಲದಿದ್ದರೆ ಇವೊತ್ತು ಆಬಚಿಯು ಸುಬೂಗೆ ಒಳಿತಾಗಿ ಶಿಕ್ಷೆ ಮಾಡು ತ್ತಿದ್ದಳು!

'ಒಳ್ಳೇದು ಬರತೀನಿ' ಎಂದು ರಮಾಕಾಂತ ಒಮ್ಮೆಲೆ ಹೊರಟ. ಅವನ ಈ ತ್ರೋಟಕತನದ ಬಗ್ಗೆ ಸುಲೋಚನೆಗೆ ಆಶ್ಚರ್ಯವಾಗದೆ ಹೋಗಲಿಲ್ಲ.

ಮುಂಬಯಿಯ ಶೂನ್ಯ ಬೀದಿಗಳು ಹುಣ್ಣಿವೆಯ ಬೆಳದಿಂಗಳಲ್ಲಿ ಮಿಂದು ಏಳುತ್ತಿದ್ದವು. ಆದರೆ ಆ ದೃಶ್ಯವನ್ನು ನೋಡಿ ರಮಾಕಾಂತನಿಗೆ, ಮುತ್ತೈದೆಯ ಹೆಣಕ್ಕೆ ಸ್ನಾನಕ್ಕೆ ಹಾಕುವದು ನೆನಪಾಯಿತು.



೪

## ಒಬ್ಬ ಸ್ತ್ರೀ—ಎರಡು ಹೃದಯಗಳು

ಒಂದು, ಎರಡು, ಮೂರು. . ಸಾವಳಸು ಹನ್ನೆರಡು ಗಂಟೆಗಳನ್ನು ಕೇಳಿದ. ಆಗ ಒಂದು ಮಗ್ಗುಲಿಂದ ಇನ್ನೊಂದು ಮಗ್ಗುಲಿಗೆ ಹೊರಳಿದ. ಜೇಲಿಗೆ ಬಂದಮೇಲೆ ಕಣ್ಣಿಗೆ ಕಣ್ಣು ಹಚ್ಚದೆ ಅವನು ಕಳೆದ ರಾತ್ರಿ ಇದೇ ಮೊದಲನೆಯದು. ಅವನಿಗೆ ತನ್ನೊಳಗೆ ಈ ಮಾತಿನ ಆಶ್ಚರ್ಯ ವಾಗುತ್ತಿತ್ತು. 'ಕ' ವರ್ಗದ ಕೊಂಡವಾಡೆಯಲ್ಲಿ ಸುಖದಿಂದ ನಿದ್ದೆ ಬರಬೇಕಾದರೆ ಮನುಷ್ಯನು ಸ್ಥಿತಪ್ರಜ್ಞನೇ ಇರಬೇಕು. ಸಾವಳಸು ಅಂಥವನೇ ಇದ್ದನೆಂಬದರಲ್ಲಿ ಸಂಶಯವಿದ್ದಿಲ್ಲವಾದರೂ ಇಂದು ಅವನ ವಿರಕ್ತವೃತ್ತಿಗೆ ದೊಡ್ಡ ಏಟು ಬಿದ್ದಿತ್ತು. 'ನಾಳೆ ಮುಂಜಾವಿಗೆ ನಿನ್ನ ಬಿಡುಗಡೆಯಾಗುವದು' ಎಂಬ ಜೇಲರನ ಶಬ್ದಗಳು ಅವನ ಕಿವಿಯಲ್ಲಿ ಸುಳಿಯುತ್ತಿದ್ದವು.

ಸಾವಳನು ಕಣ್ಣು ತೆರೆದು ನೋಡಿದ. ಇಂದು ಹುಣ್ಣಿವೆಯೆಂಬುದು ಅವನಿಗೆ ಗೊತ್ತಿತ್ತು. ಅವನ ಮೇಲಿನ ಸಿಪಾಯಿ ಸಂಜೆಯ ಮುಂದೆ ಯಾವದೋ ಹುಣ್ಣಿವೆಯ ಜಾತ್ರೆಯ ಬಗ್ಗೆ ಮಾತಾಡುತ್ತಿದ್ದ. ಬೆಳದಿಂಗಳೊಡನೆ ಇದ್ದರೆ ಕವಿಗಳ ಹಾಗೂ ತುಡುಗರ ಸಂಬಂಧವಿರುತ್ತದೆ. ಸಾವಳನು ಕವಿಯಾಗಿದ್ದಿಲ್ಲವೆಂಬುದು ಸ್ಪಷ್ಟವಿದೆ. ಇಲ್ಲವಿದ್ದರೆ ಜೇಲಿನಲ್ಲಿ ಕಳೆದ ಏಳು ವರ್ಷಗಳ ಅವಧಿಯಲ್ಲಿ ಅವನು ನಾಲ್ಕಾರು ಮಹಾಕಾವ್ಯಗಳನ್ನು ಬರೆದು ಮರಾಠಿ ವಾಙ್ಮಯದ ಈ ದೊಡ್ಡ ಕೊರತೆಯನ್ನು ದೂರಮಾಡುತ್ತಿದ್ದ! ಅವನು ತುಡುಗನಿದ್ದದ್ದು ನಿಜ. ಆದರೆ ಮನಸ್ಸಿನಲ್ಲಿ ಬೆಳ್ದಿಂಗಳಿರುವ ಹಾಗೆ ಅವನ ಸ್ಥಿತಿಯೆಲ್ಲಿತ್ತು? ಅಪರಾಧವು ಸಿದ್ಧವಾಗಿ ಹೋದಮೇಲೆ ಈಗ ಏಳು ವರ್ಷದಿಂದ ಅವನು ಜೇಲಿನಲ್ಲಿ ಕಲ್ಲು ಒಡೆಯುತ್ತಿದ್ದನು.

ಹೀಗಿದ್ದೂ ಸಂಜೆಯ ಮುಂದೆ ಆ ಸಿಪಾಯಿಯ ಬಾಯಿಂದ 'ಹುಣ್ಣಿವೆಯ ಜಾತ್ರೆ'ಯೆಂಬ ಶಬ್ದಗಳನ್ನು ಕೇಳಿದಾಗಿನಿಂದ ಅವನು ತೀರ ನೆಮ್ಮದಿಯಿಲ್ಲದಾಗಿಬಿಟ್ಟಿದ್ದ. ಹತ್ತು ವರ್ಷಗಳ ಹಿಂದಿನ ಹೋಳೀ ಹುಣ್ಣಿವೆ ಅವನ ಕಣ್ಣಮುಂದೆ ಕಟ್ಟಿತ್ತು. ಮಾಗಿಯಲ್ಲಿ ತುಳಸಿಯು ತನಗೆ ಮಾಲೆ ಹಾಕಿ ಮದುವೆಯಾದಾಗ 'ಹಾರೂರಾಗ ಸಿಗಾಣೆಲ್ಲ ಇಂತಾ ಹೆಣ್ಣು' ಎಂದು ಊರಿಗೆ ಊರೇ ಮಾತಾಡಿತು. ತನ್ನ ತುಳಸಿ ಅಂತಾ ಚೆಲುವೇನೆ ಇದ್ದಳು. ಇದ್ದಳು ಯಾಕೆ? ಇನ್ನೂ ಇದ್ದಾಳು. ಈಗೇನು ಅಂತಾ ಬಾಳ ವಯಸ್ಸು ಆಗೇತಿ? ಬಾಳ ಬಾಳ ಅಂದರ ಇಪ್ಪತ್ತೈದು ವರ್ಸದಾಕಿ ಆಗಿದ್ದಾಳು!

ತುಳಸೀ ತಾಯಿ ಇದ್ದರ ಈಕಿನ್ನ ಬಸವಿ ಧಂಧೆಕ್ಕ ನಿಲ್ಲಿಸಿ ಬಿಡತಿದ್ದಳು. ತಮ್ಮ ಜಾತ್ಯಾಗ ಈಗರ ಸರ್ರಾಸ ಲಗ್ನ ಎಲ್ಲಿ ಆಕ್ಕಾವ? ಮತ್ತ ತುಳಸೀ ಕಂಟ ಎಷ್ಟು ಸವಿ ಆದ! ಕಲ್ಲಮ್ಯಾಗ ಬೀಸಿಗೋತ ಹಾಡಾಕ ಹತ್ತಿದಳಂದರ ಹಾದೀಗುಂಟ ಹೋಗೂವವರು ಸುದ್ದಾ ನಿಂತಲ್ಲೆ ನಿಂದರಬೇಕು. ಮನಿಯರಕ ಎಂತಾದದ? ಹೆಂಟೀ ಗ್ವಾಡಿ, ಮ್ಯಾಗ ಹುಲ್ಲಿನ ಚಪ್ಪರ. ಸಂಸಾರೆಲ್ಲಾ ಒಂದ ಕ್ವಾಣ್ಯಾಗ. ಒಮ್ಮೆ ಆ ಗಡಿಗೀ-ಮಡಿಕೀ

ಆಡಕಲದಾಗ ಒಂದು ಹಾವು ಬಂದು ಕೂತಿತ್ತು. ಏನೋ ವ್ಯಾಳ್ಯಾ ಚಲೋದಿತ್ತು. ಇಲ್ಲದಿದ್ದರ ತನಗದು ಕಡದs ಬಿಡೂದು. ತುಳಸಿ ಆ ಕಡೆ ಬೀಸಿಗೋತ ಹಾಡತಿದ್ದಳು. ಈ ಕಡೆ ನಾಗಪ್ಪನವರ ಸ್ವಾರೀ ಗಡಗೀ ಒಳಗಿಂದ ಹೆಡಿ ಹೊರಗ ತಗದು ತೂಗಾಡತಿತ್ತು. ಗಡಗೀ ಒಳಗ ಏನ ಅಗಳಾಡತದ ನೋಡಬೇಕಂತ ನಾ ಹೋದೆ—ಅಯ್ಯಪ್ಪಾ! ನೆಪ್ಪಾದರ ಈಗ ಸುದ್ದಾ ಕೂದಲ ನೆಟ್ಟಗ ನಿಲ್ಲತಾವ!

ಸಾವಳನ ಮನಸ್ಸು ಹಾವನ್ನು ಬಿಟ್ಟು ಮತ್ತೆ ಬೆಳದಿಂಗಳೊಡನೆ ಆಡಹತ್ತಿತು. ಕಾಮಾಪುರದ ಹುಣ್ಣಿವೆಯ ಜಾತ್ರೆ ಅವನಿಗೆ ನೆನಪಾಯಿತು. ಆ ವರ್ಷ ದೇವಿಗೆ ಕೋಣವನ್ನು ಬಲಿಕೊಡುವದಿತ್ತು. ಆ ದಿವಸ ಕಾಮಾಪುರಕ್ಕೆ ಹೋಗುವಾಗ ತುಳಸಿ ತನ್ನ ತುಂಬುತುರುಬಿನ ಸುತ್ತಲೂ ಹಾಕಿಕೊಂಡ ಸುರಂಗೀ-ಅಬೋಲಿ ಹೂವುಗಳ ಸರವು ಅವನಿಗೆ ಕಾಣ ಹತ್ತಿತು. ಅತ್ತರವನ್ನು ನಾಚಿಸುವ ಆ ಸುರಂಗೀ ಹೂವಿನ ಗಂಧವು ಆ ಕತ್ತಲೆಯ ಕೊಟಡಿಯಲ್ಲಿ ಇಡುಗಿದಂತೆ ಅವನಿಗೆ ಭಾಸವಾಯಿತು. ಆ ಜಾತ್ರೆಗೆ ಪಾತ್ರೆಗಳು ಬಹಳವಾಗಿ ಮಾರಲಿಕ್ಕೆ ಬರುತ್ತಿದ್ದವು. ತುಳಸಿಯು ಒಂದು ಬಿಂದಿಗೆಯನ್ನೂ ಬ್ರಾಹ್ಮಣರ ಮಾಟಿನ ಹಿತ್ತಾಳೆಯ ಒಂದು ತಂಬಿಗೆಯನ್ನೂ ಮತ್ತೆರಡು ಮೂರು ಪಾತ್ರೆಗಳನ್ನೂ ಕೊಳ್ಳಬೇಕೆಂದು ಹಟತೊಟ್ಟಳು. ತನ್ನ ಕಿಸೆಯಲ್ಲಿದ್ದವು ಐದೇ ರೂಪಾಯಿ. ಜೂಜಿನ ಕಡೆಗೆ ಹೋಗುವದಿದ್ದ ಕಾರಣ ತಾನು ಪಾತ್ರೆ ಕೊಳ್ಳುವದಿಲ್ಲವೆಂದು ಹೇಳಿದ. ಅವಳು ಮುಳುಮುಳು ಅತ್ತು ಗುಡಿಯಲ್ಲಿಯ ನಾಟಕಕ್ಕೆ ಹೋಗಿ ಕೂತಳು. ತಾನು ಜೂಜಿಗೆ ಹೋಗಿ ಕೂತ. ಐದು ಇದ್ದದ್ದು ಐನೂರು ಆಯಿತು ಆ ರಾತ್ರಿಯಲ್ಲಿ! ಮಾರ್ಗಶಿರದಲ್ಲಿ ಅವಳೊಡನೆ ಲಗ್ನ ಆದದ್ದು. ತುಳಸಿಯ ಕಾಲಗುಣದಿಂದ ಇಷ್ಟು ದುಡ್ಡು ಸಿಕ್ಕಿತೆಂದು ತಿಳಿದು ಅವಳು ಹೇಳಿದ ಎಲ್ಲ ಪಾತ್ರೆಗಳನ್ನೂ ತಾನು ಕೊಂಡುಬಿಟ್ಟ! ಪಾತ್ರೆ ನೋಡಿದ ಕೂಡಲೆ ಅವಳಿಷ್ಟು ನಕ್ಕಳು—ನೋಡಿದರೆ ಇಂಥಾ ಪುಕ್ಕಳಾಕೆ. ಆದರೆ ಆ ತನ್ನ ಆನಂದದಲ್ಲಿ ಹೊಲೆಯರು ಕೋಣ ಕಡಿಯುವದನ್ನು ನೋಡಲಿಕ್ಕೆ ಸಹ ಬಂದುಬಿಟ್ಟಳು!

ಆದರೆ ಆ ನಗೆಯನ್ನು ತಾನೆಲ್ಲಿ ಅವಳ ಮೋರೆಯ ಮೇಲೆ ಇರಗೊಟ್ಟೆ? ಅಂದು ಪಾತ್ರೆ ಬಂದವೆಂದು ಅವಳಿಗೆ ಆನಂದವಾಯಿತು. ಆದರೆ ಅಂದಿನಿಂದಲೇ ತನಗೆ ಜೂಜಿನ ಚಟವು ಪೂರ್ಣವಾಗಿ ಹತ್ತಿಬಿಟ್ಟಿತು. ಕಾವಾಪುರದ ಗೇರುಹಣ್ಣಿನ ಕಾರಖಾನದಾರನಾದ ಆ ದಾದಾ—ಅವನ ಹೊಲದೊಳಗೆ ನಾಲ್ಕು ತಿಂಗಳು ಚೆನ್ನಾಗಿ ದುಡಿದಾಗ ಹೊಟ್ಟೆಪೂರ್ತಿ ಭತ್ತ ಬರಬೇಕಾದರೆ ಸಾಕುಬೇಕಾಗಿ ಹೋಗುತ್ತಿತ್ತು! ಅಂದು ಒಂದೇ ರಾತ್ರಿಯಲ್ಲಿ ಐನೂರು ರೂಪಾಯಿ! ತನ್ನ ಕಣ್ಣು ಪೂರಾ ತಿರುಗಿ ಹೋದವು. ತುಳಸಿಯು ಕಣ್ಣಿಗೆ ಕಾಣಿಸದಂತೆ ಆದಳು. ಜೂಜು, ಸೆರೆ, ಕಳವು—ಆ ದಾದಾನ ಹೊಲದ ಲಾವಣಿ ಮುಗಿದರೂ ತಾನು ಅದರ ಗಣನೆಗೆ ತರಲಿಲ್ಲ. ತುಳಸಿ ಕೂಲಿ ಕುಂಬಳಿ ಮಾಡಿ ಅದು ಹೇಗೊ ತನ್ನ ಹೊಟ್ಟೆ ತುಂಬಿಕೊಳ್ಳುತ್ತಿದ್ದಳು. ತಾನು ಸುಧಾರಿಸಿದವನಾಗಲಿಕ್ಕೆ ಹೋದ. ಆದರೊಳಗೂ ಸಾವಕಾರರ ಮಕ್ಕಳು ಸೂಳೆಯರನ್ನಿಡುತ್ತಾರೆಂದು ತಾನೂ ಆ ನಾದಕ್ಕೆ ಬಿದ್ದನು. 'ಹಾರೂರು ಸುದ್ದಾ ಸೆರೆ ಕುಡೀತಾರ' ಎಂದು ಹೇಳಿ ತಾನೂ ಸೆರೆ ಕುಡಿಯಹತ್ತಿದ. ಸಾಲ ಬೆಳೆಯಿತು. ದುಂದು ನಡೆಯುದಂತಾಯಿತು. ಹಾಗೇ ಮುಂಬಯಿಗೆ ಬಂದುಬಿಟ್ಟ. ಒಳ್ಳೇ ನಡತೆಯಿಂದಿದ್ದು ತುಳಸಿಗಾಗಿ ಮನೆಗೆ ನಾಲ್ಕು ದುಡ್ಡು ಕಳಿಸಬೇಕೆಂದು ಮನದಲ್ಲಿಯ ಎಣಿಕೆ. ಆದರೆ ದೇವರಿಗೆ ಮನುಷ್ಯನ ಎಣಿಕೆಯ ಪರಿವೆಯೆಲ್ಲಿ? ಒಂದು ದಿನ ರಾತ್ರಿ ತುಳಸಿಯನ್ನು ನೆನಸಿ ತಾನು ಅತ್ತುಬಿಟ್ಟಿದ್ದ. ಆದರೂ ಇದೆಲ್ಲಾ ಎಲ್ಲೆಲ್ಲೊ ಹೋಯಿತು. ಮುಂಬಯಿಯು ಆ ಚಂಡಾಳಚೌಕಡಿ ಗಂಟುಬಿತ್ತು. ತುಡುಗು ದಕ್ಕಹತ್ತಿದವು. ದುಂದುಗಾರಿಕೆ ಮತ್ತೆ ಸುರುವಾಯಿತು. ಕಡೆಗೆ ಕಾವಾಪುರದ ಗೇರುಹಣ್ಣಿನ ಕಾರಖಾನದಾರರ ಮನೆಗೆ ದರೋಡೆ ಹಾಕುವದು ಗೊತ್ತಾಯಿತು. ಆ ಹಂಚಿಕೆ ತಪ್ಪಿತು. ಮುಂಬಯಿಯ ತನ್ನ ಸಂಗಡಿಗರು ಏನೂ ಶಿಕ್ಷೆಯಾಗದೆ ಪಾರಾದರು. ತನ್ನ ಪಾಲಿಗೆ ಏಳುವರ್ಷ ಸಶ್ರಮ ಶಿಕ್ಷೆಯು ಗಂಟುಬಿತ್ತು. ನಾಳೆ ತಾನು ಜೇಲಿನಿಂದ ಹೊರಬೀಳುವವ. ಆದರೆ ಈ ಕಪ್ಪು ಮೋರೆಯನ್ನು ತುಳಸಿಗೆ ಹೇಗೆ ತೋರಿಸಬೇಕು?

ಅದನ್ನು ನೋಡಲಿಕ್ಕೆ ತುಳಸಿಯು ಈ ಭೂಮಿಯ ಮೇಲಾದರೂ ಇರಬಹುದೆ? ಜೇಲಿಗೆ ಬಂದ ಆರು ತಿಂಗಳಲ್ಲಿ ತಾನು ಅವಳಿಗೊಂದು ಪತ್ರ ಕಳಿಸಿದ. ಅವಳು ಸಿಗುವದಿಲ್ಲವೆಂದು ಅದು ತಿರುಗಿ ಬಂದಿತು. ಅವಳು ಮುಂಬಯಿಗೆ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಹೋಗಿರಬಹುದು; ಆದರೆ ಗಿರಣಿಯೊಳಗಿನ ಕಠಿಣಶ್ರಮದ ಕೆಲಸವು ಅವಳ ಕೈಯಿಂದಾದೀತೆ? ಗಿರಣಿಯ ಮಾಲಕನ ಹೆಂಡತಿಯಾಗಲಿಕ್ಕೆ ಒಪ್ಪುವ ತುಳಸಿಯು ಗಿರಣಿಯಲ್ಲಿ ಕೂಲೀ ಮಾಡುವದೆ? ಛೆ! ಒಣ ಎಲೆಯು ಉರವಲವಾಗುತ್ತದೆ; ಹೂಗಳನ್ನು ಯಾರಾದರೂ ಉರಿಯುತ್ತಾರೆಯೆ?

ತುಳಸಿ ಈಗ ಎಲ್ಲಿರಬಹುದು? ಏನು ಮಾಡುತ್ತಿರಬಹುದು? ಊರಲ್ಲಂತೂ ಇಲ್ಲ. ಮುಂಬಯಿಗೆ ಹೋಗಿ—

ಈ ವಿಚಾರದಿಂದ ಸಾವಳನ ತಲೆಗೆ ಕೊಡಲಿಯ ಏಟು ಬಿದ್ದಂತಾಯಿತು. ಕಡೆಗೆ ತುಳಸಿಯು ತನ್ನ ಜಾತಿಗೆ ಹೋದಳೋ ಏನು? ರೂಪವಿದೆ, ದನಿಯಿದೆ, ಅವಳ ತಾಯಿಯುಂತೂ ಅದೇ ಉದ್ಯೋಗ ಮಾಡುತ್ತಿದ್ದಳು. ತಾಯಿ ಸತ್ತಳೆಂದು ಇವಳ ಲಗ್ನವಾಯಿತು—ಇಲ್ಲದಿದ್ದರೆ ಇಂದು ಅವಳು ಮುತ್ತುರತ್ನದ ವಸ್ತುಗಳನ್ನಿಟ್ಟುಕೊಂಡು ಒಬ್ಬ ಶೇಠಜಿಯೊಡನೆ ಮೋಟರಿನಲ್ಲಿ ಮೆರೆಯುತ್ತಿದ್ದಳು. ತುಳಸಿ ಹೀಗೆ ಕೆಟ್ಟ ನಡತೆಯವಳಾದರೆ ಆ ತಪ್ಪು ಯಾರದು? ಅವಳದೆ? ಅವನ ಕಿವಿಯಲ್ಲಿ ಯಾರೋ ಹೇಳುತ್ತಿದ್ದರು—'ನಿನ್ನದು, ಎಲ್ಲ ತಪ್ಪು—ನಿನ್ನದು.'

ಶರೀರದೊಡನೆ ಅವನ ಮನಸ್ಸೂ ತಳಮಳಿಸಹತ್ತಿತು. ತನ್ನ ದೋಷವೆ? ಹೌದು; ಎಲ್ಲಾ ದೋಷವು ತನ್ನದೆ! ಚಿಕ್ಕಂದಿನಿಂದ ಎಲ್ಲ ಮಾತುಗಳೂ ಅವನಿಗೆ ನೆನಪಾದವು. ಮರಾಠಿ ಶಾಲೆಯಲ್ಲಿ ತನ್ನ ವರ್ಗದಲ್ಲಿಯೇ ಶ್ರೀರಂಗನೆಂಬ ಒಬ್ಬ ಸಾವಕಾರರ ಹುಡುಗನಿದ್ದ. ಅವನ ಆ ಲಕಲಕ ಹೊಳೆಯುವ ಬಟ್ಟೆಗಳು, ಬೈತಲೆ ತೆಗೆದ ಕೂದಲು, ಅತ್ತರದ ಘಮಘಮಾಟ—ಅವನನ್ನು ನೋಡಿ ತಾನೂ ಅವನಂತೆ ಆಗಬೇಕೆಂದು ಅನಿಸಹತ್ತಿತು. ಶ್ರೀಯು ಶಾಲೆಗೆ ತಡಮಾಡಿ ಬಂದರೂ ಅವನಿಗೆ ಏಟು ಬೀಳುತ್ತಿದ್ದಿಲ್ಲ. ಅಭ್ಯಾಸದಲ್ಲಿ ಹಿಂದೆ ಇದ್ದರೂ ಪ್ರತಿ ವರ್ಷ ಅವನು

ಮೇಲಿನ ಇಯತ್ತೆಗೆ ಹೋಗುತ್ತಿದ್ದ. ಮರಾಠಿ ಏಳನೆ ಇಯತ್ತೆಯಲ್ಲಿದ್ದಾಗ ಅವನು ಒಂದು ದಿವಸ ಒಬ್ಬ ಸೂಳೆಯ ಮನೆಗೆ ಹೋಗಿ ಬಂದಿದ್ದ. ಮರುದಿವಸ ಅವನು ಹೇಳಿದ ಅಲ್ಲಿಯ ಮೋಜು—ತಾನೂ ಅವನಂತೆ ಮಾಡಬೇಕೆಂದು ಎನಿಸಹತ್ತಿತು.

ಕೂಲಿಕುಂಬಳಿಯನ್ನು ಮಾಡಿ ತಾಯಿ ತನ್ನನ್ನು ಶಾಲೆಗೆ ಕಳಿಸುತ್ತಿದ್ದಳು. ತನ್ನ ನಡತೆಯನ್ನು ನೋಡಿ ಅವಳು 'ಸಾವಳಾ, ಹಿಂಗ ನೀ ಮಾಡಬಾರದು' ಎಂದಳು.

'ಅವಾ, ಶ್ರೀ, ಮಾಡತಾನಲ್ಲ?'

'ಶ್ರೀ ಮಾತ ಬ್ಯಾರೆ, ನಿನ್ನ ಮಾತ ಬ್ಯಾರೆ!'

'ಅದ್ಯಾಕ?'

'ಅವ ಶ್ರೀಮಂತ ಇದ್ದಾನ! ಏನ ಮಾಡಿದರೂ ದಕ್ಕತೈತಿ!'

ಶ್ರೀಯು ಶ್ರೀಮಂತ, ತಾನು ಬಡವ. ಅಂತೇ ಇಬ್ಬರಲ್ಲಿ ಇಷ್ಟು ಅಂತರ! ತಾನೂ ಶ್ರೀಮಂತನಾಗಬೇಕೆಂದು ಇಚ್ಛಿಸಿದ. ಆದರೆ ಮರಾಠಿ ಏಳನೆ ಇಯತ್ತೆಯಲ್ಲಿ ನಾಪಾಸಾದ ಹುಡುಗನು ಶ್ರೀಮಂತನಾಗುವದು ಹೇಗೆ? ಕಡೆಗೆ ಲಾವಣಿಯಿಂದ ಹೊಲ ಮಾಡುವದೇ ತನ್ನ ಪಾಲಿಗೆ ಬಂದಿತು. ಅದನ್ನೇ ಪ್ರಾಮಾಣಿಕತನದಿಂದ ಮಾಡಿದ್ದರೆ? ಮಾಡಿದ್ದರೆ ಹೊಟ್ಟೆತುಂಬ ತಿನ್ನಲಿಕ್ಕೆ ಸಿಗುತ್ತಿತ್ತೋ? ಯಾರಿಗೆ ಗೊತ್ತು? ಆದರೆ ತುಳಸಿಯಾದರೂ ತನ್ನವಳಾಗುತ್ತಿದ್ದಳು!

ತಲೆಯಲ್ಲಿಯ ವಿಚಾರಗಳ ಕಾವು ಅಸಹ್ಯವಾಗಿ ಸಾವಳನು ಮಲಗಿದಲ್ಲಿಯೇ ಎದ್ದುಕುಳಿತ. ಅವನ ಗದ್ದಲದಿಂದ ಹತ್ತಿರವೇ ಮಲಗಿದ ಮತ್ತೊಬ್ಬ ಕೈದಿಯ ನಿದ್ದೆ ಕೆಟ್ಟಿತು. ಅವನು ಸಿಟ್ಟಿಗೆದ್ದು 'ಜೀಳಲೇ, ಗಪ್ಪ. ಕೆಲಸ ತಪ್ಪಿಸಿದ್ದಿ ಕಾಣತದ ಇವತ್ತು. ಅವನ ಈ ತ್ರಾಸದ ಉದ್ಗಾರದಿಂದ ಸಾವಳನಿಗೆ ಎರಡು ಮೂರು ತಿಂಗಳ ಹಿಂದಿನ ಇಂಥದೇ ಒಂದು ಮಾತಿನ ನೆನಪಾಯಿತು. ಜೇಲು ನೋಡಲಿಕ್ಕೆ ಕಲೆಕ್ಟರನೋ ಬೇರೆ ಯಾವನೊ ಒಬ್ಬ ಸಾಹೇಬನೋ ಬಂದಿದ್ದ. ಅವನ ಸಂಗಡ ಕೆಂಪನ್ನ ಮೋರೆ, ಬಂಗಾರದ ಕೂದಲು, ಚಕಚಕಿಸುವ ಕಣ್ಣುಳ್ಳ ಬಹಳ

ಚೆಂದನ್ನ ಹುಡುಗನೊಬ್ಬ ಬಂದಿದ್ದ. ಎಂದೂ ಆಗದಿದ್ದಷ್ಟು ತುಳಸಿಯ ನೆನಪು ಆ ಹುಡುಗನನ್ನು ನೋಡಿ ಆಯಿತು. ತಾನು ಸರಳವಾಗಿದ್ದರೆ ಆ ಹುಡುಗನಷ್ಟೇ—ಅವನಷ್ಟೇ ಕೆಂಪನ್ನ ಹುಡುಗನು ತನಗೂ ಇರುತ್ತಿದ್ದ. ತನ್ನ ತುಳಸಿಯೇನು ಚೆಲುವಿಕೆಯಲ್ಲಿ ಕಡಿಮೆಯಾಗಿದ್ದಾಳೆ? ಆದರೆ ತಾನೇ ದುರ್ದೈವಿ! ಆ ಹುಡುಗನಿಂದ ತುಳಸಿಯ ನೆನಪಾಗಿ ಆ ರಾತ್ರಿ ನಿದ್ದೆ ಹತ್ತ ಲಿಲ್ಲ. ತಾನು ಒಂದು ಮಗ್ಗುಲಿಂದ ಇನ್ನೊಂದು ಮಗ್ಗುಲಿಗೆ ಹೊರಳಾಡಹತ್ತಿದ. ತನ್ನ ಹೊರಳಾಟ ನೋಡಿ ಹತ್ತಿರವೇ ಮಲಗಿದ ಆ ಬಾಪ್ಪಾ ಅವರು ಎಚ್ಚರಾದರು. ಅವರು ಮೆಲ್ಲನೆ ತನ್ನ ಹೆಗಲ ಮೇಲೆ ಕೈಯಿಟ್ಟು 'ಸಾವಳ, ನಿನಗೆ ಏನಾಗಿದೆ?' ಎಂದು ಕೇಳಿದರು.

'ಏನಿಲ್ಲ. ಮನಿಯಾಕಿಯ ನೆಪ್ಪು ಆಗೇದರಿ ಬಾಪ್ಪಾ ಅವರ!'

'ಖರೇ ಅದನಪಾ! ನಾ ಹೇಗೆ ಆರಾಮ ಇದ್ದೀನ್ನೋಡು. ಲಗ್ನಾನೇ ಮಾಡಿಕೊಂಡಿಲ್ಲ ಮೊದಲು!'

ಬಾಪ್ಪಾ ಅವರ ಇಂಥ ಚೇಷ್ಟೆಯಿಂದ ತನ್ನ ಉದಾಸ ಮನಸ್ಸಿಗೆ ಯಾವಾಗಲೂ ಆನಂದವಾಗುತ್ತಿತ್ತು. ನಿಜವಾಗಿಯೂ ಎಲ್ಲಿದ್ದಾರು ಈಗ ಬಾಪ್ಪಾ ಅವರು? ಬಡವರ ಕೆಲಸ ಎಲ್ಲಿದ್ದರೂ ಅವರು ಇದ್ದವರೇ! ಎಂಥ ದೇವ ಮನುಷ್ಯರು! ಉಳಿದ ಸತ್ಯಾಗ್ರಹಿಗಳು 'ಕ' ವರ್ಗದಲ್ಲಿದ್ದ ರೆಂದು ತಾವು 'ಬ' ವರ್ಗವನ್ನು ಬಿಟ್ಟು 'ಕ' ವರ್ಗಕ್ಕೆ ಬಂದರು. ನನಗೆ ಅನ್ನವು ಹೆಚ್ಚು ಸೇರುತ್ತದೆಂದು ಅವರು ನನ್ನ ರೊಟ್ಟಿಯನ್ನು ತೆಗೆದು ಕೊಂಡು ತಮ್ಮ ಅನ್ನವನ್ನು ಕೊಡಲಿಕ್ಕೆ ಕೂಡ ಹಿಂದೆಮುಂದೆ ನೋಡು ತ್ತಿದ್ದಿಲ್ಲ. ಒಂದೇ ಹೊಟ್ಟೆಯ ಅಣ್ಣ ಕೂಡ ಇಷ್ಟು ಪ್ರೀತಿ ಮಾಡ ಲಿಕ್ಕಿಲ್ಲ. ಹೋಗುವಾಗ ಅವರು ಹೇಳಿ ಕೂಡ ಹೋದರು—ಸಾವಳಾ, ಇನ್ನು ಹೊರಬಿದ್ದೆಂದರೆ ಪುನರ್ಜನ್ಮ ಆಯಿತೆಂದು ತಿಳಿ. ಕೆಲಸ ಮಾಡಿ ಹೊಟ್ಟೆಗೆ ಏನಾದರೂ ಸಿಗದಿದ್ದರೆ ನನ್ನ ಕಡೆ ಬಾ. ತುಡುಗು ಮಾತ್ರ ಮಾಡಬೇಡ' ಎಂದು.

ಬಾಪ್ಪಾ ಅವರ ನೆನಪಿನಿಂದ ಸಾವಳನ ಮನವು ಸ್ವಲ್ಪ ಸ್ಥಿರವಾ ಯಿತು. ನಾಳೆ ತನ್ನ ಬಿಡುಗಡೆಯಾಗುವದೆಂದು ಅವನ ಒಂದು

ಮನಸ್ಸಿಗೆ ಆನಂದವಾಗುತ್ತಿತ್ತು. ಇನ್ನೊಂದು ಮನಸ್ಸಿಗೆ ಸಣ್ಣ ತರಂಗವನ್ನು ಬಿಟ್ಟು ದೊಡ್ಡ ತರಂಗದಲ್ಲಿ ಹೋಗುವೆನೆಂಬ ಕಲ್ಪನೆಯಿಂದ ಭಯವಾಗುತ್ತಿತ್ತು. ತುಡುಗನೆಂದು ಮುದ್ರೆಯೊತ್ತಿದ ಮನುಷ್ಯನನ್ನು ಯಾರಾದರೂ ತಮ್ಮ ಬಾಗಿಲಲ್ಲಿ ನಿಲ್ಲಗೊಡುವರೇ? ಬೇರೆ ಯಾರೂ ನಿಲ್ಲಗೊಡದಿದ್ದರೂ ಇಬ್ಬರು ಮಾತ್ರ ನಿಶ್ಚಯವಾಗಿಯೂ ನಿಲ್ಲಗೊಡುವರು.

ಒಬ್ಬರು ಬಾಪ್ಪಾ ಅವರು, ಇನ್ನೊಬ್ಬಳು ತುಳಸಿ!

ನಾಳೆ ಮುಂಜಾನೆ ತನ್ನ ಪುನರ್ಜನ್ಮವಾಗುವದೆಂಬುದೇ ನಿಜ!

ರಾತ್ರಿಯೆಲ್ಲವೂ ಸಾವಳನು ತನ್ನ ಪುನರ್ಜನ್ಮದ ಕನಸುಗಳನ್ನು ಕಾಣುತ್ತಿದ್ದ. ಬಾಪ್ಪಾ-ತುಳಸಿ-ತುಳಸಿಗೆ ಆದ ಕೆಂಪನ್ನ ಹುಡುಗ-ಈ ಪುನರ್ಜನ್ಮದಲ್ಲಿ ಅಲ್ಲಿಂದಿಲ್ಲಿಗೆ ಬರೀ ಆನಂದವೇ ಆನಂದವು ಕುಣಿಯುತ್ತಿತ್ತು.

ಆದರೆ ಪುನರ್ಜನ್ಮವು ಹಿಂದಿನ ಜನ್ಮದ ಮೇಲೆಯೇ ಸಿಗುತ್ತದೆಂಬ ಹಿಂದೂಧರ್ಮಶಾಸ್ತ್ರವು ಅವನಿಗೆ ಗೊತ್ತಿದ್ದರೆ—

* * * * *

ಕಾಲದ ಒಂದು ಕ್ಷಣವು ಎಷ್ಟು ಚಿಕ್ಕದೆಂದು ಅನಿಸುತ್ತದೆ. ಆದರೆ ಕ್ಷುದ್ರ ಜಂತುವನ್ನು ಸೂಕ್ಷ್ಮದರ್ಶಕಯಂತ್ರದಿಂದ ನೋಡಿದರೆ ಅದರ ಶರೀರದೊಳಗಿನ ತೊಡಕು ತೊಡಕಿನ ಕಲ್ಪನೆ ಬರುವಂತೆ ಕಾಲದ ಒಂದು ಕ್ಷಣದ ಕಡೆಗೂ ಭಾವನೆಯ ದೃಷ್ಟಿಯಿಂದ ನೋಡಿದರೆ ಅದರಲ್ಲಿ ಇಡೀ ಬ್ರಹ್ಮಾಂಡವೇ ಕಾಣತೊಡಗುತ್ತದೆ. ಸಮುದ್ರದ ಒಂದೊಂದು ಹನಿಯಲ್ಲಿಯೂ ಹೇಗೆ ಶೊಳವೂ ಉಪ್ಪೂ ಕೂಡಿರುವವೊ ಹಾಗೆಯೇ ಅನಂತ ಕಾಲದ ಒಂದು ಕ್ಷಣದಲ್ಲಿಯೂ ಜಗದೊಳಗಿನ ಸುಖದುಃಖಗಳು ಸಮರಸವಾಗಿ ಮೆರೆಯುತ್ತಿರುವವು. ಅರಮನೆಯಲ್ಲಿ ತುಪ್ಪಳದ ಗಾದಿಯ ಮೇಲೆ ತಳಮಳಿಸುವ ಅರಸು, ಫುಟಪಾಥದ ಮೇಲೆ ಮುದುಡಿಕೊಂಡು ಗೊರಕೆ ಹೊಡೆಯುವ ತಿರುಕ, ವ್ಯಸನಿಯಾದ ಗಂಡನ ದಾರಿಕಾಯುತ್ತಿರುವ ಹೆಂಡತಿಯ ಕಣ್ಣೀರು, ಅದೇ ಗಂಡನೊಡನೆ ವಿಲಾಸಮಗ್ನಳಾದ ವೇಶ್ಯೆಯ ಬಟ್ಟಲಲ್ಲಿಯ ಮದ್ಯ,

ಹೊಟ್ಟೆಗಾಗಿ ತುಡುಗಿಗೆ ಹೊರಟ ಮನುಷ್ಯನ ಎದೆಗುದಿ, ತುಡುಗರ ಭೀತಿಯಿಂದ ಗಕ್ಕನೆ ಎಚ್ಚರಿಯುವ ದುಡಿಯದೆ ದುಡ್ಡು ಕೂಡಹಾಕಿದ ಧನಿಕನ ಚಿಂತೆ, ಸ್ವಪ್ನದಲ್ಲಿ ತನ್ನ ಸತ್ತ ಗಂಡನ ತೋಳಿನ ಮೇಲೆ ತಲೆಯಿಡಲಿಕ್ಕೆ ಸಿಕ್ಕದ್ದರಿಂದ ತರುಣ ವಿಧವೆಯ ನಿದ್ರಿತ ಮುಖದ ಮೇಲೆ ಮೂಡುವ ಆನಂದ, ಮಗ್ಗುಲಲ್ಲಿಯೇ ಮಲಗಿದ ಪ್ರಿಯಪತ್ನಿಯು ಸತ್ತಂತೆ ಭಾಸವಾಗಲು ತರುಣ ಪತಿಯ ಮೋರೆಯಲ್ಲಿ ತೋರುವ ಸಪ್ಪಗಿನ ಕಳೆ—ಜಗತ್ತಿನಲ್ಲಿಯ ಪರಸ್ಪರ ವಿರೋಧಿಗಳಾದ ಭಾವನೆಗಳ ಹಾಗೂ ಸುಖದುಃಖಗಳ ರಸಾಯನಿಕ ಮಿಶ್ರಣವೇ ಮಧ್ಯರಾತ್ರಿಯ ಒಂದು ಕ್ಷಣದಲ್ಲಿ ಆಗುತ್ತದೆ. ಅತ್ತಕಡೆಗೆ ತುರಂಗದಲ್ಲಿ ಸಾವಳನಿಗೆ ತುಳಸಿ ಎಲ್ಲಿರಬಹುದೆಂಬ ಕಲ್ಪನೆಯಿಂದ ನಿದ್ದೆ ಬಾರದಂತಾಗಿತ್ತು. ಇತ್ತ ರೇಶಿಮೆಯ ದಿಂಬುಗಳ ಮೇಲೆ ತಲೆಯಿಟ್ಟು ಮಲಗಿದ ರಮಾಕಾಂತನನ್ನು ಸಹ ಒಂದೇ ಪ್ರಶ್ನೆಯು ಅಲ್ಲೋಲಕಲ್ಲೋಲ ಮಾಡಿತ್ತು.

'ವತ್ಸಲೆ ಎಲ್ಲಿ ಹೋದಳು?'

ತಾನು ಮೈಮೇಲೆ ಒಗೆದ ವಹಿಯನ್ನು ಅವಳು ಪೂರ್ಣವಾಗಿ ಓದಿರಬೇಕು. ಸಿಟ್ಟಿನ ಭರದಲ್ಲಿ ಅವಳು ಜೀವ ಕೊಡಲಿಕ್ಕಿಲ್ಲವಷ್ಟೆ? ಕೊಟ್ಟರೆ ನಾಳಿನ ವರ್ತಮಾನಪತ್ರದಲ್ಲಿ ಅಚ್ಚಾಗಿ ಬರುವದು.

**"ಪ್ರಖ್ಯಾತ ಕಥಾಲೇಖಕರಾದ ರಮಾಕಾಂತ ಇವರ ಪತ್ನಿಯ ಆತ್ಮಹತ್ಯೆ!"**

ಜನರು ಎಷ್ಟು ತರ್ಕ—ವಿತರ್ಕಗಳನ್ನು ಮಾಡಿಯಾರು? ವಾಙ್ಮಯದಲ್ಲಿಯ ತನ್ನ ಮಿತಶತ್ರುಗಳು ಸುರಂಗೆಗೂ ತನಗೂ ಇದ್ದ ಗುರುತಿನ ಬಗ್ಗೆ ಕಂಡಂತೆ ಅರ್ಥಮಾಡಿ ಈ ಪ್ರಸಂಗದ ಮೇಲೆ ಕಥೆ ಕಾದಂಬರಿಗಳನ್ನು ಗೀಚಬಹುದು. ಸ್ವತಃ ಸುರಂಗೆಗಾದರೂ ಏನೆನಿಸಬಹುದು? ಸುಲೋಚನೆ ಎರಡು ದಿವಸಗಳ ಹಿಂದೆಯೇ ಅಂದಿದ್ದಿಲ್ಲವೆ 'ನಿಮ್ಮ ಮನೆಯವರು ಬಂದ ಕೂಡಲೆ ತಪ್ಪದೆ ಹೇಳಿರಿ ನನಗೆ'. ಸುರಂಗೆಗಂತೂ ತಾನು, ತನಗೊಬ್ಬ ಹೆಂಡತಿಯಿರುವಳೆಂಬ ಸುದ್ದಿಯನ್ನು ಸಹ ಹತ್ತಗೊಟ್ಟಿದ್ದಿಲ್ಲ. ಛೇ! ಈ ವತ್ಸಲೆ ತನ್ನ ಪೂರ್ವಜನ್ಮದ ವೈರಿಯೇ ಸರಿ!

ತರ್ಕದ ಗಾಳಿ ಬದಲಿಸಿತು. ವಿಚಾರಚಕ್ರವು ಬೇರೊಂದು ದಿಕ್ಕಿನಿಂದ ತಿರುಗಹತ್ತಿತು.

ಅವಳು ಸಾಂಗಲಿಗೆ ಸೋದರ-ಮಾವನ ಕಡೆಗೆ ಹೊರಟುಹೋಗಿರಲಿಕ್ಕಿಲ್ಲವಷ್ಟೆ? ಹೋಗಲಿ! ಆಜನ್ಮ ಅಲ್ಲಿಯೇ ಇದ್ದರೆ ನೆಟ್ಟಗೇ ಆಯಿತು. ಬೇಡಿದಷ್ಟು ಪೋಟಗಿ ಕೊಡುವೆ. ಆದರೆ ಕಣ್ಣಮುಂದೆ ಬೇಡ ಆ ಪೀಡೆ! ನಾನೇನು ಬಂದರದ ಹಮಾಲನೋ, ಕಚೇರಿಯ ಕಾರಕೂನನೋ? ಶರೀರ ಸುಖದ ಮುಂದೆ ಲಗ್ನದ ಕಲ್ಪನೆಯೇ ಹರಿಯದ ಪಶುತುಲ್ಯ ಮನುಷ್ಯನು ಇಂಥ ಹೆಂಡತಿಯೊಡನೆ ಒಂದು ವೇಳೆ ಸುಖದಿಂದ ಸಂಸಾರ ಮಾಡಬಹುದು! ಆದರೆ ಶರೀರ? ಕಲಾವಂತನಿಗೆ ಶರೀರದ ಬೆಲೆಯೆಷ್ಟು? ಕಲೆಯು ಹಾಗೂ ಸೌಂದರ್ಯದ ಸಂಬಂಧವು ಶರೀರಕ್ಕಿಂತಲೂ ಬುದ್ಧಿ-ಹೃದಯಗಳ ಕೂಡ ಹೆಚ್ಚಾಗಿಲ್ಲವೆ?

ಆದರೆ ಅವಳು ಬಹುತರವಾಗಿ ಮಾವನ ಕಡೆಗೆ ಹೋಗಿರಲಿಕ್ಕಿಲ್ಲ. ಲಗ್ನವಾದ ಮೇಲೆ ಒಮ್ಮೆ ಸಹ ಅವಳು ಅತ್ತಕಡೆ ಹೊರಳಿ ನೋಡಿಲ್ಲ ಕೂಡ! ತಂದೆಯವರ ಬೇಸೆಯ ಸೆವವು ಅವಳಿಗೆ ತಾನಾಗಿ ಸಿಕ್ಕಿತೆನ್ನ-ಬೇಕು. ಆದರೆ ಮಾವನ ಮನೆಯ ಕಡೆಗೆ ಅಷ್ಟೊಂದು ಅವಳ ಎಳೆತವಿರಲಿಲ್ಲವೆನ್ನುವದೇ ನಿಜ. ಮತ್ತೆ ಯಾರೂ ಸಮಾಪದ ಆಪ್ತೇಷ್ಟರಿಲ್ಲ, ಗೆಳತಿಯರಿಲ್ಲ. ಅಂದಮೇಲೆ ಇವಳು ಹೋದದ್ದೆಲ್ಲಿ?

ಅವಳು ಜೀವಕೊಟ್ಟರೂ ಅದು ಯಾರಿಗೂ ಗೊತ್ತೇ ಆಗದೆ ಹೋದರೆ? ಸಮುದ್ರದಲ್ಲಿ ಮುಳುಗಿದವರ ಹೆಣಗಳು ಕೂಡಲೆ ದಂಡೆಗೆ ಬರುವದು ಆಪ್ಟರಲ್ಲೇ ಇದೆ. ಅನಾಯಾಸವಾಗಿ ವಿಮಾನಗಳಿಗೆ ಮೇಜವಾನಿ ಸಿಕ್ಕೀತು! ಇದರಲ್ಲಿ ಕೆಡಕೇನು?

ಈ ರಾಕ್ಷಸೀ ವಿಚಾರವು ಮನಸ್ಸಿನಲ್ಲಿ ಬರುತ್ತಲೇ ರಮಾಕಾಂತನು ಹಾಸಿಗೆಯಿಂದ ಎದ್ದ. ಕಲೆಯ ನೃತ್ಯಭೂಮಿಯಾದ ತನ್ನ ಹೃದಯದಲ್ಲಿ ಈ ಅಮಂಗಲ ಕಲ್ಪನೆಯು ತಾಂಡವವಾಡುವದೆಂದರೆ ಅವನಿಗೆ ಆಶ್ಚರ್ಯವಾಯಿತು. ಕಲ್ಪವೃಕ್ಷಕ್ಕೆ ಎಂದಾದರೂ ಕವಳಿಯ ಹಣ್ಣು ಆಗುತ್ತದೆಯೆ? ಸೌಂದರ್ಯದ ನಂದನವನದಲ್ಲಿ ನಲಿಯುವ ತನ್ನ ಬುದ್ಧಿ!

ಸ್ಮಶಾನಕ್ಕೆ ಯೋಗ್ಯವಾದ ಈ ಅಸಹ್ಯ ವಿಚಾರಕ್ಕೆ ಅದು ಅವಕಾಶ ವನ್ನಾದರೂ ಹೇಗೆ ಕೊಟ್ಟಿತು ?

ರಮಾಕಾಂತ ಮನೆತುಂಬ ಸುತ್ತಿಬಂದ. ಅಡಿಗೆಮನೆಯ ಕೋಣೆ ಯಲ್ಲಿ ವತ್ಸಲೆಯ ಟ್ರಂಕು ಹಾಗೇ ಇತ್ತು. ಮಧ್ಯಾಹ್ನದಲ್ಲಿ ಕೋಲ ಮೇಲೆ ಒಣಹಾಕಿದ ಸೀರೆಗಳು ಇದ್ದಂತೆ ಇದ್ದವು. ವತ್ಸಲೆಯು ಅಂದು ಎರಕೊಂಡದ್ದರಿಂದ ಕೂದಲು ಹಿಕ್ಕಲಿಕ್ಕೆಂದು ಸಂಜೆಯಮುಂದೆ ಹಣಿಗೆ ಕನ್ನಡಿಗಳ ಪೆಟ್ಟಿಗೆಯನ್ನು ಮುಂದಿಟ್ಟುಕೊಂಡು ಕುಳಿತಿದ್ದಳು. ಆ ಪೆಟ್ಟಿಗೆಯಲ್ಲಿಯ ಕನ್ನಡಿಯು ಸೊಟ್ಟಾಗಿ ನಿಲ್ಲಿಸಿದ್ದು ಹಾಗೇ ಇತ್ತು. ರಮಾಕಾಂತನು ತಟ್ಟನೆ ಅದರ ಮುಂದೆ ಕುಳಿತ. ಕನ್ನಡಿಯಲ್ಲಿ ತನ್ನ ಮೋರೆ ನೋಡಲು ತನ್ನದು ತನಗೇ ಭಯವಾಯಿತು. ಕನ್ನಡಿಯಲ್ಲಿ ಇಣಿಕಿ ಯಾರೋ ಅನ್ನುತ್ತಿದ್ದರೇನೊ—'ನೀನೇ ಕೊಂದವನು. ನೀನೇ ವತ್ಸಲೆಯ ಕೊಲೆ ಮಾಡಿದಿ'

ಈಗ ಮಾತ್ರ ರಮಾಕಾಂತನಿಗೆ ಅಂಜಿಕೆ ಬರಹತ್ತಿತು. ಅವನು ಮೇಜಿನ ಹತ್ತರ ಬಂದು ಕಾಗದ ಪತ್ರಗಳನ್ನು ತಿರುವಿಹಾಕಿದ. ಅಲ್ಲಿ ಆ ವಹಿಯೊಂದು ಇದ್ದಿಲ್ಲ. 'ಬಕುಲ'ದ ಒಂದು ಹಳೇ ಸಂಚಿಕೆ ಅರ್ಧ ತೆರೆದದ್ದು ಹಾಗೇ ಬಿದ್ದಿತ್ತು. ಅದನ್ನವನು ಎತ್ತಿ ನೋಡಿದ. ದೊಡ್ಡ ಅಕ್ಷರದಲ್ಲಿ ಮೊದಲಿಗೆ ಒಂದು ಸುದ್ದಿ ಇತ್ತು. "ಉಗಿಬಂಡಿಯ ಹಳಿಯ ಮೇಲೆ ಬಿದ್ದು ಒಬ್ಬ ಹೆಂಗಸು ಜೀವಕೊಟ್ಟಳು. ಹೆಣವು ತೀರ ಚೂರುಚೂರಾಗಿದ್ದದರಿಂದ ಯಾರದೆಂದು ಗೊತ್ತಾಗುವದು ಶಕ್ಯವಿರ ಲಿಲ್ಲ."

ರಮಾಕಾಂತನಿಗೆ ನಿಜವೆನಿಸಿತು. ಈ ಸುದ್ದಿಯನ್ನೋದಿ ವತ್ಸಲೆಯೂ ಜೀವಕೊಡಲಿಕ್ಕೆಂದೇ ಹೋಗಿರಬೇಕು. ಆ ವಹಿಯನ್ನು ಜೀವಕೊಟ್ಟ ಸ್ಥಳದಲ್ಲಿ ಇಡಬೇಕೆಂದು ಅವಳ ವಿಚಾರವಿರಬೇಕು. ಮೇಲೆ ನನ್ನ ಹೆಸರು! ಒಳಗೆ ಬರೆದದ್ದು ನನ್ನ ಆಯುಷ್ಯದೊಳಗಿನ ನಿಜ-ನಿಜವಾದ ಮಾತುಗಳು. ಸಾಯುತ್ತಲೇ ಸೇಡುತೀರಿಸಿಕೊಳ್ಳುವವಳು ಇವಳು.

ಆ ವಹಿ ಕಾರೋನರ (Coroner)ನ ಕೋರ್ಟಿನಲ್ಲಿ ಹೋಗುವದು.

ಅಲ್ಲಿಂದ ಅದರ ಆಧಾರದ ಮೇಲೆ ವರ್ತಮಾನಪತ್ರಗಳು ನನ್ನ ಆಯುಷ್ಯ ಕ್ಕೆಲ್ಲ ಮಸಿ ಬಳಿಯುವವು! ಎಂಥ ಕೆಟ್ಟ ಮುಹೂರ್ತದ ಮೇಲೆ ತನಗೆ ಆ ಮಸಿಯನ್ನು ಅವಳ ಮೈಮೇಲೆ ಒಗೆಯುವ ಬುದ್ಧಿ ಬಂದಿತು?

ವರ್ತಮಾನಪತ್ರವನ್ನು ಮಡಿಕೆಮಾಡಿ ಇಡುತ್ತಿರುವಾಗಲೆ ಅದ ರೊಳಗಿನ '**ಬೀಕು**' ಎಂಬ ಗೇರುಹಣ್ಣಿನ ಕಾರಖಾನೆಯ ಜಾಹಿರಾತು ಕಣ್ಣಿಗೆ ಬಿತ್ತು. ಅವನಿಗೆನಿಸಿತು—ಬ್ರಹ್ಮದೇವನ ತಲೆ ತಿರುಗಿರಲಿಕ್ಕೆ ಸಾಕು. ವಿದ್ಯಾಧರನಂಥ ಆ ಕಾಡ ಮಿಕಕ್ಕೆ ವತ್ಸಲೆ ಒಳ್ಳೇ ಹೆಂಡತಿ ಯಾಗುತ್ತಿದ್ದಳು! ಆದರೆ ಈಗ ಅವನಿಗೂ ಸುಲೋಚನೆಗೂ ಒಳ್ಳೇ ನಿಕಟಸಂಬಂಧವು ಬರುವದು. ಗೇರು ಒಡೆಯುವ ಯಂತ್ರವನ್ನೊಂದು ಅವನಿಗೆ ತಯಾರಿಸಲಿಕ್ಕೆ ಬಂದರೆ—ಐದುಸಾವಿರವಷ್ಟೇ ಯಾಕೆ, ಇಡೀ ಕಾರಖಾನೆಯನ್ನೇ ಹೊಡಕೊಂಡು ಕೊಡಬಹುದು ಅವನು! ಮನೆಯ ಅಳಿಯನಾಗುವ ಈ ಮಗ! ಅವನಿಗಿಂತ ತನಗೂ ಸುಲೋಚನೆಗೂ ಎಷ್ಟೋ ಸಾಮ್ಯವಿದೆ. ಆದರೆ—

ವತ್ಸಲೆಯು ಜೀವಕೊಟ್ಟರೆ ಸುಲೋಚನೆ ತನಗೆ ದೊರೆಯಲು ಪ್ರತಿಬಂಧವೇನಿದೆ? ಆದರೆ ಆ ಮಸಿ ಮಾತ್ರ ಯಾರ ಕೈಗೆ ಹತ್ತುವದೂ ಸರಿಯಲ್ಲ.

'ಸುಂದರ ಚಿತ್ರ'ವೆಂಬುದೊಂದು ಕಥೆಯನ್ನು ಅವನು ಕೂಡಲೇ ಬರೆಯಬೇಕಾಗಿತ್ತು. ಆದರೊಳಗಿನ ಸಮುದ್ರದ ಮೇಲಿನ ಬೆಳದಿಂಗಳ ಪ್ರಸಂಗವನ್ನು ಅವನು ಚಿತ್ರ ಬರೆಯುವ ಬಗ್ಗೆ ಒಮ್ಮೆ ಸುಲೋಚನೆಗೆ ಹೇಳಿಯೂ ಇದ್ದ. ಆ ಕಥೆಯ ಬಗ್ಗೆ ವಿಚಾರಮಾಡುತ್ತ ನಿದ್ದೆಹೋಗ- ಬೇಕೆಂದು ಅವನು ಹಾಸಿಗೆಯ ಮೇಲೆ ಒಂದು ಬಿದ್ದುಕೊಂಡ. ಆದರೆ ಅವನ ಅಂತಃಕರಣವು ತಳಮಳಿಸುತ್ತಿತ್ತು. ಎಷ್ಟೋ ವೇಳೆ ಮಗ್ಗುಲಿಂದ ಮಗ್ಗುಲೆಗೆ ಹೊರಳಾಡಿದ. ಆದರೆ ಕಾಲು ಮೇಲೆ ಕೆಳಗೆ ಮಾಡಿದರೆ ಅದರಲ್ಲಿ ಉಳುಕುವ ಮುಳ್ಳು ಹೊರಗೆ ಬರುವದು ಶಕ್ಯವೆ?

ತಲೆಯು ಜಡವಾಗಿತ್ತು, ಮೈಯು ದಣಿದಿತ್ತು. ಆದರೆ ಏನು ಮಾಡಿದರೂ ನಿದ್ರಾದೇವಿ ಪ್ರಸನ್ನಳಾಗಲಿಲ್ಲ. ಅವನು ಎದ್ದುಬಂದು

ಗ್ಯಾಲರಿಯಲ್ಲಿ ನಿಂತುಕೊಂಡ. ಭವ್ಯವಾದ ಬೀದಿ. ಎದುರಿನ ಆ ಸುಂದರವಾದ ಬಂಗಲೆ. ಎಲ್ಲವೂ ಇದ್ದಂತೆಯೇ ಇದ್ದವು. ಅದೇ ಮಧ್ಯರಾತ್ರಿ ಮೀರಿದ್ದರಿಂದ ಬೀದಿಯಲ್ಲಿ ಏನೂ ಓಡಾಟವಿರಲಿಲ್ಲವೆಂದೇ ಹೇಳಬಹುದು. ಬೆಳದಿಂಗಳಲ್ಲಿ ಇಮಾರತುಗಳು ಹಗಲಿಗಿಂತ ಸುಂದರವಾಗಿ ಕಾಣುತ್ತವೆ. ಆದರೆ ರಮಾಕಾಂತನಿಗೆ ಅವು ಭಯಾನಕವಾಗಿ ತೋರಿದವು; ಮೇಲೆ ಹೂ ಹರವಿದ ಹೆಣಗಳೇನೋ ಎಂಬಂತೆ. ಅದೇ ಮನುಷ್ಯರಿಂದ ಬೀದಿಯು ತುಂಬಿಹೋಯಿತೆಂದರೆ ಆ ಚಿತ್ರವು ಇವೇ ಇಮಾರತಿಗಳಿಂದ ಎದ್ದುತೋರುತ್ತದೆಂಬುದು ಈಗ ಅವನ ಲಕ್ಷ್ಯಕ್ಕೆ ಬಂದಿತು. ಕಲೆ ಹಾಗೂ ಸೌಂದರ್ಯಗಳಿಗಿಂತ ಜೀವನದ—ಬರೀ ಸರಳ ಜೀವನದ ಬೆಲೆಯು ಹೆಚ್ಚಾದೀತೇ?

ಈ ಪ್ರಶ್ನೆಗೆ ಉತ್ತರವನ್ನು ಕೇಳಲಿಕ್ಕೇನೊ ಎನ್ನುವಂತೆ ಅವನು ಚಂದ್ರನ ಕಡೆಗೆ ಮೇಲೆ ನೋಡಿದ. ಶಾಲೆಯಲ್ಲಿದ್ದಾಗ ನಿರ್ವಾಹವಿಲ್ಲದ್ದಕ್ಕೆ ಪಾಠ ಮಾಡಿದ ಗೀತೆಯೊಳಗಿನ ಒಂದು ಸಾಲು ಅವನಿಗೆ ನೆನಪಾಯಿತು.

"ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ।"

'ಒಂದೇ ರಾತ್ರಿಯಲ್ಲಿ ನಾನು ಮುದುಕನಾದೆನೋ ಏನು?' ಎಂಬ ವಿಚಾರವು ಆ ಗೀತೆಯ ಸಾಲಿನ ಬೆನ್ನ ಹಿಂದೆ ಅವನ ಮನದಲ್ಲಿ ಬಂದಿತು.

ಚಂದ್ರನ ಕಡೆಗೆ ನೋಡಿ 'ಶಾಪಸಂಭ್ರಮ'ದೊಳಗಿನ ತನ್ನ ಪ್ರೀತಿಯ ಪದವೊಂದನ್ನು ಅವನು ಗುಣುಗುಣು ಹಾಡಹತ್ತಿದನು.

* * * *

ಮರುದಿವಸ ಮುಂಜಾನೆ ಹತ್ತುಗಂಟೆಗೆ ಸಾವಳನು ತನ್ನ ಏಳು ವರ್ಷಗಳ ಹಿಂದಿನ ಬಟ್ಟೆಗಳನ್ನು ತೊಟ್ಟುಕೊಂಡು ಜೇಲಿನ ಕಡೆಯ ನಿರೋಪವನ್ನು ತಕ್ಕೊಂಡ. ಕೋಟು ತೊಟ್ಟುಕೊಳ್ಳುವಾಗ ಕಿಸೆಯಲ್ಲಿಯ ಒಂದು ವಸ್ತ್ರವು ಅವನ ಕೈಗೆ ಹತ್ತಿತು. ವಸ್ತ್ರವೇಕೆ? ಹೃದಯದಲ್ಲಿ ಮುಳುಗಿದ್ದ ಮಧುರಸ್ಮೃತಿಯೇ ಕೈಗೆ ಹತ್ತಿತೆನ್ನಬೇಕು. ಈ ವಸ್ತ್ರಕ್ಕೆ ತುಳಸಿ ಸ್ವತಃ ಅಂಚುಕಟ್ಟಿದ್ದಳು. ಹೊಲಿಯುವದು, ಹೆಣೆಯುವದು,

ಹಾಡುವದು, ಬಾರಿಸುವದು ಇಂಥವುಗಳಲ್ಲಿ ಆವಳಿಗೆಷ್ಟೊಂದು ಉತ್ಸಾಹ ವಿತ್ತು. ಆದರೆ ಅವಳ ಎಲ್ಲ ಇಚ್ಛೆಯನ್ನು ತಾನು ತುಳಿದು ಮಣ್ಣು ಪಾಲು ಮಾಡಿದ. ಅವಳ ತಾಯಿ ಗಳಿಸಿದ ಎಲ್ಲ ದುಡ್ಡು ಕ್ಷಯದಂಥ ಬೇನೆಯಲ್ಲಿ ಹೋಯಿತು. ಸೋದರಮಾವನಂತೂ ತೀರ ಬಡವ! ಇಲ್ಲ ದಿದ್ದರೆ ಅವಳು ಒಳ್ಳೇ ಶ್ರೀಮಂತರ ಮನೆಗೆ ಬೀಳುವಂತಿತ್ತು.

ಜೇಲಿನಿಂದ ಹೊರಬಿದ್ದ ಕೂಡಲೆ ಸಾವಳನು ತಿರುಗಿ ನೋಡಿದ. ಆದಕ್ಕೆ ಅವನು ಕಡೆಯ ದೀರ್ಘನಮಸ್ಕಾರವನ್ನೆ ಮಾಡುತ್ತಿದ್ದ ನೇನೋ! ಜೇಲಿನಲ್ಲಿದ್ದಾಗ ಕೈದಿಗಳ ಮಾತು ನಿತ್ಯವೂ ಅವನ ಕಿವಿಗೆ ಬೀಳುತ್ತಿದ್ದವು. ಒಮ್ಮೆ ಕೈದಿಯಾದರೆ ಸಾಯುವವರೆಗೂ ಅವನು ಕೈದಿಯೇ ಎಂಬ ಸೂತ್ರವಂತೂ ಅವನಿಗೆ ಪಾಠವಾದಂತಾಗಿತ್ತು; ಆದರೆ ಹೊರಗೆ ಬಂದು ಜೇಲಿನ ಕಡೆಗೆ ನೋಡುವಾಗ ಅವನಿಗೆನಿಸಿತು—ಈ ನರಕಕ್ಕೆ ತಾನೇನೂ ಇನ್ನು ತಿರುಗಿ ಒರುವವನಲ್ಲ. ಹೊರಗಿನ ಜಗತ್ತಿ ನಲ್ಲಿ ಬಾಪ್ಪಾ ಅವರು ಇದ್ದಾರೆ, ತುಳಸಿ ಇದ್ದಾಳೆ. ಅವರನ್ನು ಬಿಟ್ಟು ಈ ತಿಪ್ಪೆಯಲ್ಲಿ ಹೊರಳಾಡಲಿಕ್ಕೆ ಬರುವಷ್ಟು ನಾನೇನು ಮೂರ್ಖನಿದ್ದೇ ನೆಯೆ? ಈ ವಿಚಾರವು ಅವನ ಮನಸ್ಸಿನಲ್ಲಿ ಬಂದಾಗಲೇ ಬೇಡಿಗಳ ಕರ್ಣ ಕಟುವಾದ ಖಣಖಣ ಸಪ್ಪಳವು ಅವನಿಗೆ ಕೇಳಬಂತು. ಒಳಗೆ ಕೈದಿಗಳು ಇತ್ತಿಂದತ್ತ ಹೋಗುತ್ತಿದ್ದರು.

ಕತ್ತಲೆಯೊಳಗಿಂದ ಹೊರಗೆ ಬರುತ್ತಿರುವ ಮನುಷ್ಯನಿಗೆ ಒಮ್ಮೆಲೆ ಮುಗಿಲ ಕಡೆಗೆ ನೋಡುವದಾಗುವದಿಲ್ಲ. ಹಾದಿಗುಂಟ ಹೋಗುವಾಗ ಸಾವಳನ ಸ್ಥಿತಿಯೂ ಹೀಗೇ ಆಯಿತು. ಮೊದಲನೇ ಬೋಟನ್ನು ಹಿಡಿದು ಊರಿಗೆ ಹೋಗಬೇಕು, ಅಲ್ಲಿ ತುಳಸಿಯ ಬಗ್ಗೆ ವಿಚಾರಿಸಬೇಕು, ಎಂದಂತೂ ಅವನು ಎಂದೋ ನಿಶ್ಚಯಿಸಿದ್ದ. 'ಬೋಟು' ಸಂಜೆಗೆ ಬರು ವದು. ಅಲ್ಲಿಯ ವರೆಗೆ ಇಡೀ ದಿವಸವನ್ನು ಹೇಗೆ ಕಳೆಯುವದು? ತಾನು ಕೈದಿಯೆಂಬುದನ್ನು ಯಾರಾದರೂ ಗುರುತಿಸಿದರೆ? ಆತ್ತಿತ್ತ ತಿರುಗುವದ ರಲ್ಲಿಯೇ ಅವನು ಸುಮಾರು ಎರಡು ತಾಸು ವೇಳೆ ಕಳೆದ. ಆದರೆ ಜೇಲಿ ನಲ್ಲಿ ತರುಣನಂತೆ ಗಡಗಡನೆ ನಡೆಯುವ ಹೊತ್ತು ಈಗ ಮುದುಕನಂತೆ ಕೋಲು ಊರುತ್ತ ನಡೆದಿದೆ ಎಂದು ಅವನಿಗನಿಸಿತು.

ತಿರುಗುತ್ತ ತಿರುಗುತ್ತ ದಾರಿಯಲ್ಲಿ ಒಂದು ಚಹದ ಅಂಗಡಿ ಹತ್ತಿತು. ಏಳು ವರ್ಷದ ನಂತರ ಚಹ ಕುಡಿಯುವದು! ಹನ್ನೆರಡು ಗಂಟೆ ಆಗಲು ಬಂದಿತ್ತು! ಸಮುದ್ರ ಮಂಥನದ ಕಾಲಕ್ಕೆ ದೇವದೈತ್ಯರು ಹೇಗೆ ಆಶಾಪೂರ್ಣದೃಷ್ಟಿಯಿಂದ ಅಮೃತದ ಕಡೆಗೆ ನೋಡಿರಬಹುದೊ ಅದೇ ದೃಷ್ಟಿಯಿಂದ ನಾವಳನು ಅಂಗಡಿಯಲ್ಲಿಯ ಚಹದ ಕಪ್ಪುಗಳ ಕಡೆಗೆ ನೋಡಹತ್ತಿದ. ಅವನಿಗೆ ಜಾಪ್ಪಾ ಅವರ ಮಾತು ನೆನಪಾಯಿತು. 'ನಿನ್ನ ಚಹಾ, ಸೆರೇ ಎಲ್ಲಾ ತಾವಾಗೇ ಬಿಟ್ಟುಹೋಗಿರತಾವೆ. ಹೊರ ಬಿದ್ದಿಂದ ಮತ್ತ ಅವುಗಳ ನಾದಿಗೆ ಹತ್ತಬೇಡ.' ಮೋಹವನ್ನು ತಡೆದು ಎರಡು ಹೆಜ್ಜೆ ಮುಂದಿಟ್ಟ. ಇಷ್ಟರಲ್ಲಿಯೇ ಅಂಗಡಿಯಿಂದ ಹೊರ ಬೀಳುವ ಒಬ್ಬ ಮನುಷ್ಯನು 'ಚಹಾ ಕುಡೀಬೇಕಾದರ ಇಲ್ಲೇ' ಎಂದದ್ದು ಕೇಳಿಸಿತು.

ಚಹದ ಮಾತು ಬೇರೆ—ಸೆರೆಯ ಮಾತು ಬೇರೆ ಎಂದು ವಿಚಾರ ಮಾಡುತ್ತ ಅವನು ಒಳಗೆ ಹೊಕ್ಕ. ಅತ್ತಿತ್ತ ನೋಡಿದ. ಮಧ್ಯಾನ್ಹದ ಹೊತ್ತಾದ್ದರಿಂದ ಹಾಟೇಲಿನಲ್ಲಿ ಒಬ್ಬ ಗಿರಾಕಿಯೂ ಇರಲಿಲ್ಲ.

'ಯಾಕಪಾ ಪಿರ್‍ಯಾ ಏನ ಬೇಕು?' ಎಂದು ಹದಿನೈದು ಹದಿನಾರು ವರ್ಷದ ಟ್ಯಾಕ್ಟಿಂಗ ಮಾಲಕನು ಕೇಳಿದ.

'ಚಹಾ ಒಂದ ಕಪ್ಪ'

'ಬರೇ ಚಹಾ?'

'ಹುಂ'

'ಭಜೀ, ಚೂಡಾ, ಶಂಕರಪಾಳೆ, ಬೇಸನ ಉಂಡಿ, ಚಕ್ಕುಲಿ— ಹುಡುಗ ನಾಮಾವಳಿ ಓದಿದ. ರತ್ನಾಗಿರಿ ಜಿಲ್ಹೆಯ ಭೂಗೋಲ ಘೋಕು ಹಾಕುವ ಹುಡುಗನಿಗಾಗಲಿ, ಒಂದೇ ಘಳಿಗೆಯಲ್ಲಿ ರುದ್ರಸೂಕ್ತವನ್ನು ಹೇಳುವ ಭಟ್ಟರಿಗಾಗಲಿ ಅವನ ಸ್ವರವನ್ನು ಕೇಳಿ ಹೇವವೆನಿಸುವಂತಿತ್ತು.

'ಚೂಡಾ ಕೊಡು ಎರಡು ದುಡ್ಡಿನವು' ಎಂದು ಹೇಳಿದ. ಮಾರಾಟದ ಮೊದಲನೇ ಪರೀಕ್ಷೆಯಲ್ಲಿ ಪಾಸಾದ ಆನಂದವು ಆ ಹುಡುಗನ ಮೋರೆಯ ಮೇಲೆಯೂ ಮಿರುಗಿತು.

ಚಹಾ ತಯಾರಾಗಹತ್ತಿತು. ಸಾವಳನು ಸಹಜವಾಗಿ ಹಾಟೆಲಿನ ಎಲ್ಲಕಡೆ ನೋಡಿದ. ಎದುರಿನಲ್ಲಿಯೇ ಯಾವದೊ ನಾಟಕ ಕಂಪನಿಯು ಒಂದು ಒಳ್ಳೇ ದೊಡ್ಡ ಜಾಹೀರಾತು ಕಾಣಿಸುತ್ತಿತ್ತು. ಒಬ್ಬ ಹೆಂಗಸಿನ ಫೋಟೋ ಛಾಪಿಸಿತ್ತು ಅದರಲ್ಲಿ! ಆ ಫೋಟೋ ನೋಡಿ ಅವನಿಗೆನಿಸಿತು—ಇವಳು ತುಳಸಿಯಾಗಲಿಕ್ಕಿಲ್ಲವಷ್ಟೇ? ಕೂಡಲೆ ಅವನಿಗೆ ತನ್ನ ಹುಚ್ಚು ಮನಸ್ಸಿಗಾಗಿ ನಗೆ ಬಂತು. ತನ್ನ ಹುಚ್ಚಳಂಥ ತುಳಸಿ ನಾಟಕ ಕಂಪನಿಯಲ್ಲಿ ಹೋದಳಾದರೂ ಹೇಗೆ? ನಾಟಕವೆಂದರೆ ಸುಲಭ ಕೆಲಸವಲ್ಲ. ಸಾವಿರಾರು ಜನರ ಮುಂದೆ ನಿಂತು ಮಾತಾಡುವದು! ಅಲ್ಲದೆ ಹಾಡಲಿಕ್ಕೆ ಬರಬೇಕು. ತುಳಸಿಯು ದನಿ ಚೆನ್ನಾಗಿತ್ತು. ಆದರೆ--

ಚಹದ ಕಪ್ಪಿನ ಉಗಿ ಮೋರೆಗೆ ಬಂದದ್ದರಿಂದ ಅವನು ಗೋಣು ಹೊರಳಿಸಿದ. ಆದರೆ ಅವನು ಆ ಜಾಹಿರಾತಿನ ಕಡೆಗೆ ನೋಡುತ್ತಿದ್ದದ್ದು ಆ ಹುಡುಗನ ಲಕ್ಷ್ಯಕ್ಕೆ ಬಂತು. ಅವನಂದ 'ಹಳೇದದ ಏಳು ಆ ಜಾಹಿರಾತು!'

ಸಾವಳ ಚಹಾ ಕುಡಿಯಹತ್ತಿದ. ಎಷ್ಟು ವರ್ಷದ ಮೇಲೆ ಚಹಾ ತಗೊಂಡದ್ದು. ಮೊದಲನೇ ಗುಟುಕು ಸ್ವಲ್ಪ ಕಹಿಯಾಗಿಯೇ ಹತ್ತಿತು.

ಬೀಡಿ ಸೇದುತ್ತ ಹುಡುಗನಂದ—'ನೀವು ನೋಡೀರೊ ಇಲ್ಲೊ ಈ ಕಂಪನೀ ನಾಟಕಾ?'

'ಎಲ್ಲಿ ನೋಡಬೇಕು? ಹಳ್ಳೀ ಊರಾಗ ಇರಾವ ನಾ'

'ಎಲ್ಲಾ ಹಳ್ಳೀ ಊರ ಇಕಡೇ ಕಿತ್ತಿ ಬಂದಿತ್ತಲಾ— ಜಾತ್ರಿ ನೆರದಂಗ ಆಗತಿತ್ತು ಜಾತ್ರಿ!'

'ಗಂಧರ್ವ ಮಂಡಳೀ ಬಂದಿತ್ತು--'

'ಎಲ್ಲೀ ಗಂಧರ್ವನ್ನ ತರತೀ! ಈ ಕಂಪನ್ಯಾಗಿನ ರಂಭೇರ ಮುಂದ'

'ಹೆಂಗಸರ ಕಂಪನೀನ?'

'ಹೇ! ಹೆಂಗಸಿಂದು!'

'ಅಂದರ?'

'ಒಬ್ಬಾಕಿನಃ ಹೆಂಗಸ ಅದಾಳ. ಹೀಂಗ ನಿವಳ ಅದಾಳ—'

'ಹೆಸರೇನು ಆಕೀದು?' ಎಂದು ಸಾವಳ ಗೊಗ್ಗರ ದನಿಯಲ್ಲಿ ಕೇಳಿದ.

'ನೆಗಡಿ ಆದಾಂಗ ಕಾಣತೈತಿ ನಿಮುಗ ಹಿರ್‍ಯಾ. ಚಾ ತಗೋರಿ ಮುದಲ'

'ಇರಲೀ. ಹೆಸರೇನಾಕೀದು?'

'ನಿಮುಗೇನ ಮಾಡಬೇಕಾಗೈತಿ ಆಕೀ ಹೆಸರ ತಗೊಂಡು! ನಿಮು ಗೂಡ ಆಕೀ ಮುದಿವಿ ಮಾಡಿಕೊಳ್ಳೂದಟರಾಗೇ ಐತಿ! ಹೆಸರ ಸುದ್ಧಾ ಹೆಂಗ ಜಕಾಸ ಐತಿ ನೋಡ್ರಿ! ಮಿಸ್ ಸುರಂಗಾ!'

ಸಾವಳನ ತ್ರಸ್ತ ಮುಖದ ಮೇಲೆ ಸಮಾಧಾನ ತೋರಹತ್ತಿತು. ಚಹದ ಎರಡು ಮೂರು ಗುಟಕು ಕುಡಿದ. ಆ ಹುಡುಗ ಜಾಹಿರಾತಿನ ಕಡೆಗೆ ಬೊಟ್ಟುಮಾಡಿ ಅಂದ—'ಆ ಚಿತ್ರದ ಮ್ಯಾಗಿಂದ ಪರೀಕ್ಷಾ ಮಾಡಬ್ಯಾಡ ಎಣ್ಣಾ. ಈ ಚಿತ್ರ ಅಂದರ ನಮ್ಮ ಸೊಸಿದ ಚಾಪುಡೀ ಇದ್ದಾಂಗ. ನಿಮುಗ ಕರೇ ಕಾಣಬಾಕಿಲ್ಲಾ—ಇಲ್ಲೀ ಒಬ್ಬ ಸಾವಕಾರ ತಿಂಗಳಿಗೆ ಐನೂರು ರುಪಾಯಿ ಕೊಡಲಾಕ ತಯಾರಾಗಿದ್ದ ಆಕಿನ್ನ ಇಟಗೋಳಾಕ!'

'ಅಲ್ಲಿಂದ?' ಎಂದು ಸಾವಳ ಕುತ್ತಿಗೆ ಹಿಡಿದವರಂತೆ ಮೋರೆ ಮಾಡಿ ಕೇಳಿದ. 'ಆಕಿ ಯಾಕ ಇರತಾಳರಿ ಹನ್ನೆರಡೂರ ನೀರ ಕುಡ ದಾಕೀ! ಮತ್ತ ಆ ಮ್ಯಾನೇಜರ ಬಿಡತಾನ?' ಈ ಕಡೆಯ ವಾಕ್ಯವನ್ನು ಉಚ್ಚರಿಸುವಾಗ ಆ ಹುಡುಗ ಇಷ್ಟು ಕಿಡಿಗೇಡಿತನದಿಂದ ನಕ್ಕ—'ಅದ ನ್ನೇನು ಹೇಳಕೂಡದು' ಸಾವಳನಿಗೆನಿಸಿತು—ಕಪ್ಪು ತಗೊಂಡು ಅವನ ತಲೆಗೆ ಬೀಸಾಡಬೇಕೆಂದು. ಆದರೆ ಅಷ್ಟರಲ್ಲಿ ಏನೋ ಬಗೆದು ಅಂದ— 'ಈ ಸುರಂಗಾಗ ಹಾಡಲಾಕಗೀಡಲಾಕ ಬರತತೇನು?'

'ತೂ! ತೂ! ಹಾಡತಾಳಂತೇನ ಕೇಳತೀರಿ? ಸುಮ್ಮನ ಸಾರಂಗೀ ಬಾರಿಸಿದಂಗ ಆಗತೈತೆ ಸಾರಂಗೀ! ತೇಟರಕ ತೇಟರs ತಲಿದೂಗತೈತಿ ಹಾವಿನಂಗ.' ಆಕೀದು ಒಂದಂದರ ಒಂದ ನಾಟಕಾ ಸುದ್ಧಾ ತಪ್ಪಸಲಿಲ್ಲ ನಾ. ಆ '**ಪ್ರಣಯತರಂಗ**' ನಾಟಕದಾಗ 'ಇಶ್' ಅನ್ನಕೋತs

ಪ್ರಯೇಶ ಮಾಡತಾಳ ಆಗ ಏನರಿ? ಚಪ್ಪಾಳಿ ಮ್ಯಾಲ ಚಪ್ಪಾಳಿ ಬೀಳತಾವ.'

ಸುರಂಗೆ ಹಾಡುತ್ತಾಳೆಂಬದನ್ನು ಕೇಳಿ ಸಾವಳನಿಗೆ ಸ್ವಲ್ಪ ಹಗುರೆನಿಸಿತು. ಮತ್ತೆ ಚಹ ಕುಡಿಯು ಹತ್ತಿದ. ವಿಷಯವನ್ನು ಬದಲಿಸಬೇಕೆಂದು ಆ ಹುಡುಗ ಕೇಳಿದ. 'ನಿಮ್ಮ ಊರ ಯಕಾಡೆ ಐತರಿ.' ಬಾಳ ತೆಳಗ ಐತಿ. ವೆಂಗುರ್ಲಾದ ಹತ್ತೀಲೆ ಕಾಮಾಪೂರ ಐತಲಾ—

'ಅಂದರ ಈ ಸುರಂಗಾ ನಿಮ್ಮಾಕೀನೆ ಅನ್ನು . .!'

'ಅಂದರ?'

'ಕಾಮಾಪೂರ ಕಡೀ ಪಾತರದಾಕಿ ಮಗಳಂತ ಆಕೀ! ಬೆಳೆದ ಊರಾಗ ಕಿಮ್ಮತ ಬರೂದಿಲ್ಲ ಅನ್ನೂದ ಕರೆ ನೋಡು, ಹಿರ್‍ಯಾ.'

'ಊರ ಕಡೀದೇನೂ ಸುದ್ದಿಸುಕಾಲ ಗೊತ್ತಿಲ್ಲ ನನಗ. ಈ ಏಳು ವರ್ಷ ಆತು ನಾ ಆಕಡೆ ಹೋಗದ.'

'ಹಾಂಗಾರ ಎಲ್ಲಿದ್ದರಿ?'

ಕೈದಿಯು ಎದೆಗೆ ಬರೆ ಕೊಡುವ ಮೊದಲನೇ ಪ್ರಶ್ನೆ ದುತ್ತೆಂದು ಸಾವಳನ ಮುಂದೆ ನಿಂತಿತು. ಅವನೇನೂ ಮಾತಾಡಲೇ ಇಲ್ಲ.

'ಇಲ್ಲೇನು ಕೋರ್ಟಿನ್ಯಾಗ ಕೆಲಸ ಇತ್ತು ಕಾಣತತಿ'

'ಹೌಂದ.'

'ನಿಕಾಲ ಆತೇನ?'

ಸಾವಳ ಸುಮ್ಮನೇ ಕುಳಿತ.

'ನಿಕಾಲ ವಿರುದ್ಧ ಆದಾಂಗ ಕಾಣತೈತಿ' ಎಂದು ಹುಡುಗ ಮುಂದೆ ಸಾಗಿದ.

ಸಾವಳ ಮೇಲಿಂದ ಮೇಲೆ ಆ ಜಾಹಿರಾತಿನ ಕಡೆಗೆ ನೋಡುತ್ತಿದ್ದ. ಹುಡುಗನಂದ:

'ಸುರಂಗಾನ್ನ ನೋಡಬೇಕಾಗೇತೇನು ನಿಮಗ? ನನ ಬಲ್ಲೆ 'ಪ್ರಣಯತರಂಗ' ನಾಟಕ ಆದ ಅಲ.' ಅವನು ಒಳಗಿನ ಕೋಣೆಯಲ್ಲಿ ಹೋಗಿ ಒಂದು ಪೆಟ್ಟಿಗೆಯೊಳಗಿಂದ ನಾಟಕದ ಪುಸ್ತಕವೊಂದನ್ನು ತಂದು

ಅದರ ಮುಖ ಚಿತ್ರವನ್ನು ತೆರೆದು ಸಾವಳನ ಕೈಯಲ್ಲಿ ಕೊಟ್ಟ. ಪ್ರಿಯಕರನ ದಾರೀಕಾಯುತ್ತಿದ್ದ ನಾಯಿಕೆಯ ಚಿತ್ರವಿತ್ತು! ಸಾವಳನು ಅದರ ಕಡೆಗೆ ನಟ್ಟ ದೃಷ್ಟಿಯಿಂದ ನೋಡತೊಡಗಿದ. ನೋಡನೋಡುತ್ತ ಅವನು ಹುಬ್ಬುಗಂಟಿಕ್ಕಿದ. ತುಟಿ ಕಚ್ಚಿದ. 'ಬಳೇ ಅಡ್ನಾಡಿ ಕಾಣತೀದಲಾ ಎಣ್ಣಾ. ಚಂದನ್ನ ಮಾರಿ ನೋಡಿ ಹೊಟ್ಟಿ ನೋಸಲಾಕ ಹತ್ತ್ಯಂತ ಕಾಣತೈತಿ! ಈ ಫೋಟೊ ನೋಡಿ ಮುಂದಿ ಏನ ಮಾಡತಾರ ಗೊತ್ತೈತೇನು?'

ಆ ಹುಡುಗನು ಕೆಳಗೆ ಬಾಗಿ ಆ ಚಿತ್ರವನ್ನು ಲಟಕ್ಕನೆ ಮುದ್ದಿಸಿದ

ಸಾವಳನು ಥಪ್ಪೆಂದು ಅವನ ಮುಸುಡೆಯ ಮೇಲೊಂದು ಏಟು ಕೊಟ್ಟ.

*   *   *   *

ಇದೇ ವೇಳೆಯಲ್ಲಿ ರಮಾಕಾಂತನು ಅದೇ ಊಟ ಮಾಡಿ ಮಲಗಿ ಅಸ್ವಸ್ಥ ನಿದ್ರೆಯಲ್ಲಿ ಸುರಂಗೆಯ ಕನಸು ಕಾಣುತ್ತಿದ್ದ. ಅವನ ನಾಟಕದ ತಾಲೀಮು ಮುಗಿಯ ಬಂದಿತ್ತು. ಅದರಲ್ಲಿ ಸುರಂಗೆಯ ಮೋಹಕವಾದ ಅಭಿನಯದ ಅನೇಕ ಸನ್ನಿವೇಶಗಳು ಅವನ ಸ್ವಪ್ನಚಿತ್ರದಲ್ಲಿ ಸರಸರನೆ ಮಿಂಚಿ ಹೋಗುತ್ತಿದ್ದವು. 'ಹೀಗಲ್ಲ ಕೈ ಹಿಡಿಯೋದು. ಹೀಗೆ' ಎಂದು ಒಂದು ದಿವಸ ಅವಳ ಕೈ ಹಿಡಿದು ತಾನು ಅಭಿನಯವನ್ನು ಕಲಿಸಿದ್ದು ಅವನ ಕಣ್ಣ ಮುಂದೆ ನಿಂತಿತು.

ಇಷ್ಟರಲ್ಲಿ 'ಸಾಹೇಬ್ ಸಾಹೇಬ್' ಎಂದು ಒದರಿದ್ದು ಅವನಿಗೆ ಕೇಳ ಬಂತು.

'ಏನೋ?' ಎಂದು ಕಣ್ಣು ತೆರೆದು ಕೇಳಿದ. ಅವನ 'ಚಾಕರಿಯ ಹುಡುಗ ಬಾಗಿಲಲ್ಲಿ ನಿಂತು ಒದರುತ್ತಿದ್ದ.

'ಬಾಯಿಯವರು ಬಂದಾರ್ರಿ.'

ವತ್ಸಲೆಯೇ ಊರೆಲ್ಲ ತಿರುಗಿ ಬಂದಿರಬೇಕೆಂದು ಅವನಿಗನಿಸಿತು. ಅವನು ಉತ್ತರವನ್ನೇ ಕೊಡಲಿಲ್ಲ.

'ಅವರಿಗೆ ಏನಂತ ಹೇಳಲ್ರಿ'

'ಮನೆಬಿಟ್ಟು ಹೋಗಲಿಕ್ಕೇನೂ ನಾ ಹೇಳಿದ್ದಿಲ್ಲ'

'ಮನ್ಯಾಗಿನ ಅವ್ವನವರು ಅಲ್ಲರಿ'

'ಮತ್ತಿಲ್ಲಿಯವರು? ಕಂಪನೀಯವರ?' ಸುರಂಗೆ ಬಂದಿರಬೇಕೆಂದು ಕಲ್ಪಿಸಿ ರಮಾಕಾಂತ ಆನಂದದಿಂದ ಕೇಳಿದ.

'ಅಲ್ಲರಿ. ಮತ್ತೊಬ್ಬರು ಅದಾರ್ರಿ'

'ಮತ್ತೊಬ್ಬರು?'

ರಮಾಕಾಂತ ವಿಚಾರದಲ್ಲಿ ಬಿದ್ದ. ತ್ರಾಸದಿಂದ ಎದ್ದು ಹೊರಗೆ ಬಂದು ನೋಡುತ್ತಾನೆ ಸುಲೋಚನೆ ಬಂದು ಟೇಬಲಿನ ಹತ್ತಿರ ಕುಳಿತಿದ್ದಳು! ರಣರಣ ಬಿಸಿಲು ಸುಂದರ ಸಂಜೆಯಾಯ್ತು. ಅವನಂದ—

'ನೆಟ್ಟಗಿದೆ ಅಲ್ಲ ಈ ಮೋಸಗಾರಿಕೆ?'

'ಅಂದರೆ? ನಿಮಗೂ ನನಗೂ ವೈರ ಏನು?'

ಈ ಪ್ರಶ್ನೆ ಕೇಳುವಾಗ ಸುಲೋಚನೆ ಸ್ವಲ್ಪ ತನ್ನ ಹುಬ್ಬು ಏರಿಸಿದ್ದಳು. ಬಿಸಿಲಲ್ಲಿ ಬಂದದ್ದರಿಂದ ಅವಳ ಕೆಂಪಾದ ಗಲ್ಲಗಳು, ಸುಂದರವಾದ ದುಂಡು ಮೋರೆಯ ಮೇಲೆ 'ಭುರು ಭುರು' ಹಾರಾಡುವ ಮುಂಗುರುಳುಗಳು, ನಡುನಡುವೆ ಹೊಳೆಯುವ ಒಂದೆರಡು ಬೆವರು ಹನಿಗಳು–ರಮಾಕಾಂತನಿಗೆನಿಸಿತು–ಮೂರ್ತಿವಂತ ಸಂಧ್ಯಾದೇವಿಯೇ ತನ್ನ ಕಡೆಗೆ ಬಂದಿರುವಳೆಂದು. ಮುಳುಗುವ ಸೂರ್ಯಬಿಂಬ, ಬಣ್ಣಬಣ್ಣದ ಮೋಡಗಳು, ಕತ್ತಲೆಯ ಕೌನೆರಳು, ಅಲ್ಲೊಂದಿಲ್ಲೊಂದು ಚಿಕ್ಕಿ–ಇವೆಲ್ಲವುಗಳ ಮನೋಹರ ಸಮ್ಮೇಲನವನ್ನೇ ಅವನು ನೋಡುತ್ತಿದ್ದ.

'ಇಂಥ ಬಿಸಿಲಲ್ಲಿ ನಾ ಯಾಕೆ ಬಂದಿರಬಹುದು ಹೇಳಿರಿ ನೋಡೋಣ'

ರಮಾಕಾಂತನಿಗೆ ಪತ್ನಲೆಯ ನೆನಪಾಯಿತು. ಅವಳ ಹಣ ಪೊಲೀಸರಿಗೆ ಸಿಕ್ಕಿತೋ ಏನು? ಏನಾದರೂ ಹೇಳಬೇಕೆಂದು ರಮಾಕಾಂತ ಹೇಳಿದ–ಬಿಸಿಲ ಹೊತ್ತು ಸುಮ್ಮನೆ ಕಳೆಯೋದು ಮನಸಿನಲ್ಲಿ ಇದ್ದಿಲ್ಲವೇನೊ! ಚಿತ್ರಗಾರರಿಗೇನು ಬೆಳದಿಂಗಳದಂತೆಯೇ ಉಪಯೋಗಬಿಸಲಿನದೂ.'

'ಅಂದರೆ ಲೇಖಕರಿಗೆ ಇಲ್ಲವೇನೋ? ನಾನು ಕರೆಯಲಿಕ್ಕೆ ಒಂದಿರುವೆ ಬೇಕೆಂತ ನಿಮ್ಮನ್ನ!'

'ಬಾಪ್ಪಾ ಅವರು ಕರೆದಿರುವರೇನು ಮತ್ತೆ?'

'ಉಂ..ಹುಂ. ದಾದಾ ಬಂದಾರೆ ಮುಂಜಾನೆ'

'ಎಲ್ಲಿಂದ? ಕಾಮಾಪುರದಿಂದ?'

'ಹೌದು. ಅವರು ಬಂದಾಗ ನಾನು ನಿಮ್ಮ ಕಥೆಯೊಳಗಿನ ಚಿತ್ರ ತೆಗೆಯುತ್ತ ಕುಳಿತಿದ್ದೆ. ಅವರು ನಿಮ್ಮ ಬಗ್ಗೆ ಎಲ್ಲವನ್ನೂ ವಿಚಾರಿಸಿದರು. ನಿಮ್ಮ ಭೆಟ್ಟಿ ಆಗಲಿಕ್ಕೇಬೇಕು ಎಂದರು'

'ನನ್ನದೇ?' ರಮಾಕಾಂತ ಆಶ್ಚರ್ಯದಿಂದ ಕೇಳಿದ. ಗೇರು ಹಣ್ಣಿನ ಕಾರಖಾನದಾರನಿಗೂ ಕಥಾಲೇಖಕನಿಗೂ ಭೂಮ್ಯಾಕಾಶದಷ್ಟು ಅಂತರವಿದೆಯೆಂದು ಅವನ ಕಲ್ಪನೆಯಿತ್ತು. ಆಕಾಶವು ಅಲಂಕಾರಿಕ ಅರ್ಥದಲ್ಲಿಯೇ ಆಗಲಿ ಒಮ್ಮೊಮ್ಮೆ ಕೆಳಗೆ ಬೀಳುವದುಂಟು. ಆದರೆ ನೆಲವು ಮುಗಿಲಿಗೆ ಭೆಟ್ಟಿಯಾಗಲಿಕ್ಕೆ ಎಂದಾದರೂ ಹೋಗುವದೆ?

'ಹೌದು ನಿಮ್ಮನ್ನೆ' ಸುಲೋಚನೆ ನಗುನಗುತ್ತೆಂದಳು 'ದಾದಾ ಅವರು ಕಾರಖಾನದಾರರಾದರೂ ಅವರು ಏನು ಕಡಿಮೆ ಓದಿಲ್ಲ'

'ಓದಲಿಕ್ಕೆ ಅವರಿಗೆ ಹೊತ್ತೆಲ್ಲಿ ಸಿಗತದೆ?'

'ನಾ ತೀರ ಚಿಕ್ಕವಳಿದ್ದಾಗ ನಮ್ಮ ಅವ್ವ ತೀರಿಕೊಂಡಳು. ಆಗ ಆರು ತಿಂಗಳ ದಿವಸ ದಾದಾ ಅವರಿಗೆ ಕಣ್ಣಿಗೆ ಕಣ್ಣುಹತ್ತಲಿಲ್ಲ. ಆಗಕ್ಕೆ ಅವರಿಗೆ ರಾತ್ರಿ ಹನ್ನೆರಡು ಗಂಟೆಯು ತನಕ ಕೂಡ ಓದುತ್ತ ಕೂಡುವ ರೂಢಿ ಬಿದ್ದುಬಿಟ್ಟದೆ'

ರಮಾಕಾಂತ ಒಮ್ಮೆಲೇ ಕೇಳಿದ 'ಮನೆಯಲ್ಲಿ ನಿಮ್ಮ ಮಲತಾಯಿ ಇರುವಳೇನು?'

ಸುಲೋಚನೆಯ ಕಣ್ಣು ಹೊಳೆದವು. ಅವಳೆಂದಳು 'ಸರಿ! ಇಂದಿನವರೆಗೂ ನಾನು ನಿಮ್ಮ ಮುಂದೆ ಹೇಳಿದ್ದೇ ಇಲ್ಲವಲ್ಲ! ನಮ್ಮ ತಂದೆಗೆ ಮೂವತ್ತು ವರ್ಷ ಆಗಿದ್ದಿಲ್ಲ ಇನ್ನೂ ನಮ್ಮ ತಾಯಿ ತೀರಿ-ಕೊಂಡಾಗ. ಅಂದರೂ ಅವರು ಎರಡನೇ ಲಗ್ನ ಮಾಡಿಕೊಳ್ಳಲಿಲ್ಲ!'

ರಮಾಕಾಂತನ ಮುಖದ ಮೇಲೆ ಆಶ್ಚರ್ಯ ಮೂಡಿತು. ಸರಕಾರಕ್ಕೆ ನೂರಾರು ರೂಪಾಯಿ ತೆರಿಗೆ ಕೊಡುವ ಸಾವಕಾರ, ಸಾವಿರಾರು ರೂಪಾಯಿ ವ್ಯಾಪಾರ ಮಾಡುವ ಕಾರಖಾನದಾರ. ಮೂವತ್ತು ವರ್ಷದೊಳಗೆ ಹೆಂಡತಿಯನ್ನು ಕಳೆದುಕೊಂಡರೂ ಎರಡನೇ ಲಗ್ನವಾಗುವದಿಲ್ಲ! ಮಹಾರಾಷ್ಟ್ರದ ಮಹಾಕವಿಗಳ ಸಿದ್ಧಾಂತವು ಇಂಥ ಹುಂಬರ ಹಳ್ಳಿಯಲ್ಲಿ ಕೂಡ ಇರಬಾರದು! ಹೆಂಡತಿ ಸತ್ತಳೆಂದು ಪ್ರೇಮವು ಸಾಯುವದೆ? ಆ ಪ್ರೇಮಕ್ಕಾಗಿ ಎರಡನೇ ಹೆಂಡತಿಯನ್ನು ಮಾಡಿಕೊಳ್ಳಲೇಬೇಕಾಗುತ್ತದೆ.

ಸುಲೋಚನೆ ಮುಂದೆ ಹೇಳಹತ್ತಿದಳು—'ಒಮ್ಮೊಮ್ಮೆ ನನಗನಿಸುವದು. ನಾ ಹುಟ್ಟದ್ದಿಲ್ಲವೆಂದರೆ ನೆಟ್ಟಗಾಗುತ್ತಿತ್ತು!'

'ಹಾಗಾದರೆ ನನ್ನ ಕಥೆಗಳಿಗೆ ಇಂಥ ಅಂದವಾದ ಚಿತ್ರ ಯಾರು ತೆಗೆಯುತ್ತಿದ್ದರು?'

'ಇಸ್ಸಿ! ಹಾಗನ್ನುವದಿಲ್ಲ ನಾನು. ಮಲತಾಯಿ ನನಗ ತ್ರಾಸ ಕೊಟ್ಟಾಳು ಎಂತ ದಾದಾ ಅವರು ತಿರುಗಿ ಲಗ್ನವನ್ನೇ ಮಾಡಿಕೊಳ್ಳಲಿಲ್ಲ!'

ಲಗ್ನವನ್ನೇ ಮಾಡಿಕೊಳ್ಳದಿರುವ ಬಾಪ್ಪಾ, ಮಗಳಿಗಾಗಿ ಎರಡನೇ ಲಗ್ನವನ್ನು ಬಿಡುವ ದಾದಾ, ಇವರ ಜೀವನದ ರಹಸ್ಯವಾದರೂ ಏನು? ಎಂಬ ಪ್ರಶ್ನೆ ರಮಾಕಾಂತನಿಗೆ ಬಿದ್ದಿತು.

'ದಾದಾ ಅವರು ಇಷ್ಟು ನನ್ನ ಪ್ರೀತಿ ಮಾಡುವರು! ಅಂತೇ ಅವರ ಮನಸ್ಸಿನ ವಿರುದ್ಧ ಹೋಗುವದೆಂದರೆ ಜೀವದ ಸುತ್ತು ಬರುತ್ತದೆ ನನಗೆ. ನಾನು ಮ್ಯಾಟ್ರಿಕ್ ಪಾಸಾದಾಗ್ಗೇ ಅವರು ನನಗೆ ಮಂಗಳ ಸೂತ್ರ ಕಟ್ಟಿಬಿಡಬೇಕೆಂದು ಮಾಡಿದ್ದರು. ಆದರೆ ಬಾಪ್ಪಾ ಅವರು ಹೇಳಿದರು 'ಹುಡುಗಿಯ ಕೈ ನೆಟ್ಟಗಿದೆ. ಕಲಿಯಲಿ ಒಂದಿಷ್ಟು ಚಿತ್ರಕಲೆಯನ್ನು.' ಎಲ! ನಾನು ಬಿಸಿಲೊಳಗೆ ಯಾಕೆ ಬಂದೆ ಇದನ್ನೇ ಹೇಳುವದು ಉಳಿದೇಬಿಟ್ಟಿತಲ್ಲ! ದಾದಾ ಈಗ ಮಲಗಿಕೊಂಡಾರೆ. ಬೋಟಿನಲ್ಲಿ ಜಾಗರಣೆ ಆಗಿದೆ ಅವರಿಗೆ. ಎದ್ದು ನಿಮ್ಮ ಭೆಟ್ಟಿ ಆಗಲಿಕ್ಕೆ ಬರುವವರು

ಇದ್ದರು. ನಾನೂ ಒಂದಿಷ್ಟು ಮೋಜುಮಾಡಬೇಕೆಂದೆ. ಎದ್ದುಕೂಡಲೆ ಅವರಿಗೆ ಹೇಳಬೇಕು—'ದಾದಾ, ನಿಮ್ಮ ಮುಖ ಅಂಗಡಿ ಕಲ್ಪಲತೆ ಇದ್ದಂತೆ! ನಿಮಗೆ ಯಾರು ಬೇಕು? ರಮಾಕಾಂತ ಹೌದಲ್ಲೊ? ಇಗೊ ನೋಡಿರಿ ರಮಾಕಾಂತ!' ಹೀಗೆ ಮಾತಾಡುವಾಗ ಸುಲೋಚನೆ ಒಂದು ಸುಂದರ ಲತೆಯಂತೆ ಬಳುಕುತ್ತಿದ್ದಳು. ತಾನು ಅವಳನ್ನು ಒಂದೇಸವನೆ ನೋಡುತ್ತಿದ್ದನೆಂಬುದು ರಮಾಕಾಂತನಿಗೆ ಹೊಳೆದ ಕೂಡಲೆ ಅವನು ಮನಸ್ಸಿನಲ್ಲಿಯೇ ನಾಚಿದನು. ಅವನು ಕೇಳಿದ 'ಒಂದು ಚೀಟಿ ನನಗೆ ಕಳಿಸಿದ್ದರೂ ನಡೆಯುತ್ತಿತ್ತು'

'ಚೀಟಿಗಿಂತಲೂ ಥಪ್ಪಡವೇ ನೆಟ್ಟಗೆ!'

ಇಬ್ಬರೂ ಹೊಟ್ಟೆತುಂಬ ನಕ್ಕರು. ರಮಾಕಾಂತನು ಕನ್ನಡಿಯ ಮುಂದೆ ನಿಂತು ಬ್ರಶ್ಶಿನಿಂದ ಕ್ರಾಪು ತೀಡಿಕೊಳ್ಳಹತ್ತಿದ. ಮೇಜಿನ ಮೇಲಿನ ಕಾಗದಗಳನ್ನು ತಿರುವಿಹಾಕುತ್ತ ಸುಲೋಚನೆಯೆಂದಳು—'ಬರೀ ಚೀಟಿ ಯಾಕೆ ಕಳಿಸಲಿಲ್ಲ ಗೊತ್ತಿದೆಯೆ?'

ರಮಾಕಾಂತ ಹಿಂತಿರುಗಿ ನೋಡಿದ. ಸುಂದರವಾಗಿ ಕತ್ತರಿಸಿದ ಅವನ ಕ್ರಾಪು, ಅದರಲ್ಲಿ ನಾಜೂಕ ಬೈತಲೆ. ಮೋಹಕ ಕಳೆ, ಪ್ರಮಾಣ ಬದ್ಧವಾದ ಮೈಕಟ್ಟು—ರಮಾಕಾಂತನು ಸುಲೋಚನೆಗೆ ಆಗ ಒಂದು ಚಿತ್ರದಂತೆ ಕಾಣಿಸಿದ. ಅವಳು ತಟ್ಟನೇ ನುಡಿದಳು—'ಆ ಸುಂದರ ಚಿತ್ರದಲ್ಲಿ ಹಾಕಲಿಕ್ಕೆ ನನಗೊಬ್ಬ ನಾಯಕ ಸಿಕ್ಕ, ನೋಡಿರಿ!'

'ಎಲ್ಲಿ ಹುಡುಕಿ ತೆಗೆದಿರಿ?'

'ಇಲ್ಲೇ!'

'ನನಗಂತೂ ಕಾಣಿಸುವದಿಲ್ಲವಲ್ಲ!'

'ಮುಂದೆ ನೋಡಿರಲ್ಲ! ಅಂದರೆ ಕನ್ನಡಿಯೊಳಗೆ ಕಾಣಿಸುವದು

ರಮಾಕಾಂತನ ಅಂತಃಕರಣದಲ್ಲೊಂದು ಮಧುರವಾದ ಉತ್ಕಂಠವು ಉತ್ಪನ್ನವಾಯಿತು. ಅವನು ಉತ್ಕಂಠಿತ ಸ್ವರದಿಂದ ಕೇಳಿದ—'ಮತ್ತೆ ನಾಯಿಕೆ?'

'ಆಕೆಯೂ ಸಿಕ್ಕಳು'

'ಎಲ್ಲಿ?'

'ಜುಹೂದ ಉಸುಕಿನಲ್ಲಿ'

'ಯಾವಾಗ?'

'ನಿನ್ನೆ ರಾತ್ರಿ'

ರಮಾಕಾಂತ ಸಂದಿಗ್ಧದೃಷ್ಟಿಯಿಂದ ಅವಳ ಕಡೆಗೆ ನೋಡ ತೊಡಗಿದ.

ಸುಲೋಚನೆ ಖುರ್ಚಿಯ ಮೇಲಿಂದೇಳುತ್ತೇಳುತ್ತ ಅಂದಳು—'ನಿಮ್ಮ ಆ ಸುರಂಗೆ!'

---

೫

## ಮಾತಾಡುವ ಪೇಲಿ

ಸುಲೋಚನೆಯ ದಾದಾ ಅವರನ್ನು ರಮಾಕಾಂತನು ಸಹಜವಾಗಿ ಒಮ್ಮೆ ನೋಡಿದ್ದರೆ ಅವರನ್ನು ಈಗ ವಿಶೇಷ ಲಕ್ಷ್ಯಕೊಟ್ಟು ನೋಡು ತ್ತಿದ್ದನೋ ಇಲ್ಲವೋ ಸಂಶಯವೇ ಇದೆ. ಪಂಜೆ ಉಟ್ಟರೆ ವೈದಿಕ ಬ್ರಾಹ್ಮಣ, ರುಮಾಲು ಸುತ್ತಿದರೆ ಕಾರಕೂನ, ಜಾಕೀಟು ಹಾಕಿಕೊಂ ಡರೆ ಉಪಹಾರಗೃಹದ ಮ್ಯಾನೇಜರನಾಗಿ ಶೋಭಿಸುವ ಹಾಗೆ ಅವರ ಮೂರ್ತಿಯು ರಮಾಕಾಂತನಿಗೆ ಅಂದವಾಗಿ ಕಂಡಿತು. ಅವರ ವಯಸ್ಸು ಐವತ್ತರ ಒಳಹೊರಗೆ ಇರಬಹುದು. ಗಲ್ಲಗಳು ಚೆನ್ನಾಗಿ ತುಂಬಿದ್ದವು. ದೃಷ್ಟಿ ಬೆಕ್ಕಿನದು! ತುಟಿಯ ಮೇಲಿಂದ ಮಾತ್ರ ಗೃಹಸ್ಥನು ದೃಢ-ನಿಶ್ಚಯಿಯೂ ಒಳಗಂಟಿನವನೂ ಇರಬೇಕೆಂದು ಮುಂದಟ್ಟಾಗುವಂತಿತ್ತು.

ರಮಾಕಾಂತನೂ ಸುಲೋಚನೆಯೂ ಮನೆಗೆ ಬರುವಷ್ಟರಲ್ಲಿಯೇ ದಾದಾ ಅವರು ಎದ್ದು ಏನೋ ಕಾಗದ ಪತ್ರಗಳನ್ನು ತಿರುವಿಹಾಕುತ್ತ ಕುಳಿತಿದ್ದರು.

'ಬಾಪ್ಪಾ ಅವರು ಎಲ್ಲಿ ಹೋದರು ದಾದಾ?' ಎಂದು ಸುಲೋಚನೆ ಕೇಳಿದಳು.

'ಪರೇಳದಲ್ಲಿ ಯಾರೊ ಅಜಾರಿ ಇದ್ದಾರಂತೆ'

'ಆಪ್ತರಿದ್ದಾರೇನಲ್ಲಿ ಯಾರಾದರೂ' ಎಂದು ರಮಾಕಾಂತ ಕೇಳಿದ.

'ನಮ್ಮ ಆಪ್ತರು ಯಾರೂ ಇಲ್ಲ. ಬಾಪ್ಪಾ ಅವರ ಆಪ್ತರಿದ್ದಾರೆ!' ಎಂದು ದಾದಾ ಉತ್ತರಕೊಟ್ಟರು.

'ಅಂದರೆ?'

'ಕೂಲಿಕಾರ ಜನರೆಲ್ಲ ಅವರ ಆಪ್ತರೇ ಸರಿ' ಮಾತಾಡುತ್ತ ಆಡುತ್ತ ರಮಾಕಾಂತನ 'ಭಾವದಂತೆ ದೇವ' ಎಂಬ ಕಥೆಯ ಮಾತು ಹೊರಟಿತು. ದಾದಾ ಅವರು—'ಕಥೆ ಎಲ್ಲ ಚೆನ್ನಾಗಿದೆ. ಆದರೆ ಒಂದು ಮಾತ್ರ ನನಗೆ ನೆಟ್ಟಗೆ ಅನಿಸಲಿಲ್ಲ' ಎಂದರು.

'ಏನದು?' ರಮಾಕಾಂತ ಕೇಳಿದ.

'ಆ ಪೂಜಾರಿ ಆ ಹೆಣ್ಣುಮಗಳ ಮೇಲೆ ಪಾಪದೃಷ್ಟಿ ಇಡುವನು. ಅಂದಿನ ವರೆಗೆ ಅವನು ಎಂದಾದರೂ ಹಾಗೆ ಮಾಡಿದ್ದನೇನು?'

'ಇಲ್ಲ'

'ಹಾಗಿದ್ದರೆ ಆಕೆಯನ್ನೆ ನೋಡಿ ಅವನಿಗೆ ಇಂಥ ಬುದ್ಧಿ ಯಾಕೆ ಬಂದಿತು?'

'ಆಕೆ ಬಹಳ ಚೆಲುವೆ ಇದ್ದಳಲ್ಲ!'

'ಹಾಗಾದರೆ ಇದರಲ್ಲಿ ದೋಷ ಯಾರದು? ಪೂಜಾರಿಯದೋ ಅಥವಾ ಅವಳ ಸೌಂದರ್ಯದ್ದೋ?'

ರಮಾಕಾಂತನಿಗೆ ವಿಚಾರ ಬಿತ್ತು. ಅವನ ಕಲ್ಪನೆಯು ಸೌಂದರ್ಯದ ಎಲ್ಲ ಕಲ್ಪನೆಗಳ ಒಂದು ಪ್ರತಿಮೆಯನ್ನು ನಿರ್ಮಿಸಿತ್ತು. ಆ ಪ್ರತಿಮೆಗೆ ದಾದಾ ಅವರ ಪ್ರಶ್ನೆಯು ಏಟುಕೊಡುತ್ತಿದೆಯೆಂದು ಅವನಿಗೆ ಎನಿಸಿತು.

ತಮ್ಮ ಪ್ರಶ್ನೆ ರಮಾಕಾಂತನಿಗೆ ಅಷ್ಟು ಮನಸ್ಸಿಗೆ ಬರಲಿಲ್ಲವೆಂದು ದಾದಾ ಅವರು ಕಂಡುಹಿಡಿದರು. ಗೋಡಂಬಿಯ ಧಾರಣೆಯಲ್ಲಿದ್ದಷ್ಟು

ಅವರ ಲಕ್ಷ್ಯವು ವಾಙ್ಮಯದ ಕಡೆಗಿದ್ದಿಲ್ಲ. ಆದರೆ ರಮಾಕಾಂತನ ಮೇಲೆ ತಮ್ಮ ವರ್ಚಸ್ಸ ಕೆಡವಬೇಕೆಂದೇ ಅವರು ಈ ಪ್ರಶ್ನೆಯನ್ನು ಕೇಳಿದ್ದರು. ಅವನು ಸುಮ್ಮನಿದ್ದದ್ದನ್ನು ನೋಡಿ 'ನಮಗಾದರೂ ಏನು ತಿಳಿಯುವದೆನ್ರಿ ಇದರಲ್ಲಿ! ನಾವು ಗೋಡಂಬಿ ಸುಡಬೇಕು, ತಿಳಲು ಮಾರಬೇಕು'

ದಾದಾ ಅವರಿಗೆ ರಮಾಕಾಂತನ ಪರಿಚಯವು ಬೇರೊಂದು ಮಹತ್ವದ ಕೆಲಸಕ್ಕಾಗಿ ಬೇಕಾಗಿತ್ತು. ಆಫ್ರಿಕದಲ್ಲಿ ಹೊಸ ಗೇರುಹಣ್ಣಿನ ಕಾರಖಾನೆಗಳು ಆದ ಮೂಲಕ ಇಲ್ಲಿಂದ ಪರದೇಶಕ್ಕೆ ಹೋಗುವ ಮಾಲಿಗೆ ಅಷ್ಟೊಂದು ಪ್ರತಿಷ್ಠೆ ಇರಲಿಲ್ಲವೆಂಬುದಂತೂ ಸರಿಯೇ. ಆದರೆ ಅತ್ತಕಡೆಯ ವ್ಯಾಪಾರಿಗಳು ಇಲ್ಲಿಗೂ ಬಂದು ತಮ್ಮ ವ್ಯಾಪಾರವನ್ನು ಇಲ್ಲೆಲ್ಲ ಹಬ್ಬಿಸಿಬಿಡುವರೇನೋ ಎಂದು ಇತ್ತಿತ್ತಲಾಗಿ ಅವರಿಗೆ ಅಂಜಿಕೆ ಉಂಟಾಗಿತ್ತು. ಅಲ್ಲಿಯ ಕಂಪನಿಗಳು ತಮ್ಮ ಮಾಲಿನ ಪ್ರಸಾರಕ್ಕಾಗಿ ಎಷ್ಟೋ ಚಿತ್ರಗಳೊಡನೆ ಒಂದು ಸಣ್ಣ ಮಾಹಿತಿ–ಪುಸ್ತಕವನ್ನು ಪ್ರಸಿದ್ಧ ಮಾಡಿದ್ದವು. ಅದು ಕೈಗೆ ಬಂದ ಕೂಡಲೆ ತಮ್ಮದೊಂದು ಸ್ವದೇಶೀ ಉದ್ಯೋಗವೆಂದು ತಾವೂ ಪ್ರಸಿದ್ಧ ಮಾಡಬೇಕೆಂದು ದಾದಾ ಅವರಿಗೆ ಕಲ್ಪನೆಯು ಬಂದಿತು. ಮುಂಬಯಿಯ ಒಬ್ಬ ಒಳ್ಳೇ ಲೇಖಕನಿಂದ ಇಂಥ ಪುಸ್ತಕವನ್ನು ಬರೆಯಿಸಬೇಕೆಂದೂ ಗೋಡಂಬಿ ಒಡೆಯುವ ಯಂತ್ರ ಶೋಧಕನನ್ನು ಕರಕೊಂಡು ಹೋಗಬೇಕೆಂದೂ ಉದ್ದೇಶವಿಟ್ಟುಕೊಂಡು ದಾದಾ ಅವರು ಈಗ ಮುಂಬಯಿಗೆ ಬಂದಿದ್ದರು. ಮುಂಚಾನೆ ವಿದ್ಯಾಧರನ ಬಗ್ಗೆ ಎಲ್ಲ ಸಂಗತಿಯನ್ನು ಕೇಳಿ ಅವರಿಗೆ ಆನಂದವಾಯಿತು. ಪುಸ್ತಕ ಬರೆಯುವ ಕೆಲಸವನ್ನು ಮೈಮೇಲೆ ತೆಗೆದುಕೊಳ್ಳುವದು ಮೊದಲು ರಮಾಕಾಂತನ ಮನಸ್ಸಿನಲ್ಲಿರಲಿಲ್ಲ. ಆದರೆ ಸುಲೋಚನೆಯ ಕಣ್ಣೊಳಗಿನ ಗಾರುಡಿಯಿಂದ ಅವನಿಗೆ ಒಲ್ಲೆನ್ನುವದಾಗಲಿಲ್ಲ.

ದಾದಾ ಅವರು ವಿದ್ಯಾಧರನನ್ನು ಕರೆದುಕೊಂಡು ಮರುದಿವಸವೇ ಹೊರಡುವದನ್ನು ನಿಶ್ಚಯಿಸಿದರು. ರಮಾಕಾಂತನಂತೆ ಸುಲೋಚನೆಗಾದರೂ ಇದು ಹೇಗೊ ಹೇಗೊ ಎನಿಸಿತು. ಅವಳು ಸಲಿಗೆಯಿಂದ

ಎಂದಳು—'ಇದೇನು ದಾದಾ? ಯಾವಾಗಲೂ ನೀವು ಲಗ್ನದ ಗಡಿಬಿಡಿ ಯಲ್ಲಿದ್ದಂತೆ ಮಾಡುವಿರಲ್ಲ!'

ಮೊದಲು ಒರೀ ಉಸುಕು ಇದ್ದ ಹಳ್ಳವು ಕೂಡ ಮಳೆಗಾಲದಲ್ಲಿ ಎರಡೂ ದಂಡೆ ಸೂಸುವಂತೆ ಹರಿಯುತ್ತದೆ. ಆನಂದದ ಕ್ಷಣದಲ್ಲಿ ರುಕ್ಷ ಮನವಾದರೂ ಅಂತೆಯೆ ಬಡಲಾಗುತ್ತದೆ. ತಮ್ಮ ನುಣುಪಾದ ತಲೆಯ ಮೇಲೆ ಕೈಯಾಡಿಸುತ್ತ ದಾದಾ ಅವರು ಅಂದರು—'ಕೇಳಿದಿರಾ ರಮಾಕಾಂತ. ಸುಲೂತಾಯಿ ನನಗೆ ಯಾವಾಗಲೂ ಲಗ್ನದ ಗಡಿಬಿಡಿ ಎನ್ನುವಳು. ಹಾಗಿರುವದೇನೋ ನಿಜ. ಆದರೆ ಯಾರ ಲಗ್ನದ್ದು ಅನ್ನು-ವದು ಗೊತ್ತಿದೆಯೇ ಸುಲೂತಾಯಿ?'

'ಇಸ್ಸಿ! ಏನಾದರೊಂದು ಮಾತಾಡುವಿರಿ ಆಯಿತು, ದಾದಾ ನೀವು?' ಎಂದು ಕೊರಳು ಕೊಂಕಿಸುತ್ತ ಸುಲೋಚನೆಯು ಕಿಡಿಕಿಗೆ ಆತು ಹೊರಗೆ ನೋಡಹತ್ತಿದಳು.

'ಇಸ್ಸಿ ಎನ್ನಲಿಕ್ಕೆ ಏನಾಯಿತು? ಶ್ರಾವಣಕ್ಕೆ ಇಪ್ಪತ್ತುಮೂರು ತುಂಬಿ ಇಪ್ಪತ್ತುನಾಲ್ಕನೆಯ ವರುಷ ಸುರುವು. ಚಿತ್ರಕಲೆಯ ಪರೀಕ್ಷೆ ಯನ್ನು ಪಾಸಾದದ್ದಾಯಿತು. ಇನ್ನು ಉಳಿದದ್ದು ಒಂದೇ ಒಂದು—'

'ಹಳೇ ಜನರಿಗೆ ಕಾಣುವದೆಂದರೆ ಅದೊಂದೇ!' ಎಂದು ಸುಲೋಚನೆಯೆಂದಳು.

'ಈಗಿನವರಿಗೆ ಅದೂ ಕಾಣಿಸುವದಿಲ್ಲ'

'ಅದು ಯಾಕೆ?'

'ಪ್ರೇಮವು ಕುರುಡು ಇರುತ್ತದೆಂದು. ಬೇಕಾದರೆ ಕೇಳು ಈ ರಮಾಕಾಂತರನ್ನು. ಅವರ ಕಥೆಯೊಳಗೆ ನಾ ಇದೇ ಈಗ ಓದಿದೆ'

ತಂದೆ-ಮಕ್ಕಳ ಈ ಸಂವಾದವನ್ನು ರಮಾಕಾಂತನು ಕೌತುಕ ದಿಂದ ಕೇಳುತ್ತಿದ್ದ. ದಾದಾ ಅವರು ಅವನನ್ನು ಸಾಕ್ಷಿಯೆಂದು ನಡುವೆ ಸೇರಿಸಿಕೊಂಡರೂ ಅವನೇನೂ ಮಾತಾಡಲಿಲ್ಲ.

'ಆದರೆ ನಾನು ಲಗ್ನವನ್ನೇ ಒಲ್ಲೆನಲ್ಲ!' ಎಂದು ಹೇಳಿ ಸುಲೋ ಚನೆ ಅವರಿಬ್ಬರನ್ನೂ ಅಭಿಮಾನದಿಂದ ನೋಡಿದಳು.

'ಅದೇಕೆ?'

'ಕಲಾದೇವಿಗೆ ಕುಮಾರಿಕೆಯಾಗಿರುವದೇ ಸೇರುತ್ತದೆ!' ಎಂದು ರಮಾಕಾಂತ ಸಹಜವಾಗಿ ಅಂದುಬಿಟ್ಟ.

ಕೋಣೆಯಲ್ಲಿ ಬರಬರುತ್ತ ಬಾಪ್ಪಾ ಅವರು ಎಂದರು—'ಮೊದ ಮೊದಲು ನೆಟ್ಟಗೆನಿಸುವದು. ಮುಂದೆ ಜೋಡಿಲ್ಲದೆ ಇರುವದು ಬೇಸರ ವಾಗುತ್ತದೆ ಅವಳಿಗೆ.' ಬಾಪ್ಪಾ ಅವರ ಚತುರ ಮಾತು ಸುಲೋಚನೆಗೆ ಯಾವಾಗಲೂ ಸೇರುತ್ತಿದ್ದುದರಿಂದ ಅವಳು ಕೇಳಿದಳು–'ಬೇಸರ ಬಂದ ನಂತರ ಏನು ಮಾಡುವಳು ಕಲಾದೇವಿ?'

'ಮಾಡುವಳೇನು? ಲಗ್ನ! ಕಲಾದೇವಿ ಏನು ನನ್ನಂತೆ ಹುಚ್ಚಿ ಅಲ್ಲ!'

'ಅವಳ ಗಂಡನ ಹೆಸರೇನು?'

'ಜೀವನ.' ಬಾಪ್ಪಾ ಅವರು ಹಣೆಯ ಮೇಲಿನ ಬೆವರು ಒರಸುತ್ತ ಅಂದರು.

'ಬಾಪ್ಪಾ, ದಾದಾ ಅವರು ನಾಳೆ ಹೋಗತೀನಿ ಅನ್ನುತ್ತಾರೆ'

'ಅದಕ್ಕೆ ನಿನ್ನದೇನು ಅಂಬೋಣ?'

'ಎರಡು ದಿವಸವಾದರೂ ಅವರು ಮುಂಬಯಿ ನೋಡಬೇಕು ಎಂದು'

'ಏನೇನು ನೋಡುವಂಥಾದ್ದಿದೆ ಮುಂಬಯಿಯಲ್ಲಿ?'

'ನಾಟಕ ಅವೆ, ಸಿನೇಮಾ ಅವೆ, ಚಿತ್ರಕಲಾ ಪ್ರದರ್ಶನ—'

'ಯಾತರೊಳಗೂ ಏನೂ ಅರ್ಥವಿಲ್ಲ! ನಾ ಇದೇ ಈಗ ನೋಡಿ ಬಂದೆನಲ್ಲ ಎಲ್ಲ!'

'ಎಲ್ಲಿ? ಪರಳದಲ್ಲಿ ಏನು?'

'ಹೌದು! ಅಲ್ಲಿಯ ಕೂಲಿಕಾರರ ಆಯುಷ್ಯ ಅಂದರೆ ಒಂದು ನಾಟಕವೆ! ಅಲ್ಲಿಂದಿಲ್ಲಿಗೆ ದುಃಖ ತುಂಬಿದ್ದು. ಆದರೆ ಆ ನಾಟಕ ನೋಡ ಲಿಕ್ಕೆ ಪ್ರೇಕ್ಷಕರೆಲ್ಲಿದ್ದಾರೆ?'

'ಹಾಡಿದ್ದ ಹಾಡೊ ಕಿಸಬಾಯಿ ದಾಸ' ಎಂದು ಮುಖಮುದ್ರೆಯಿಂದಲೇ ಸೂಚಿಸುತ್ತ ಸುಲೋಚನೆ ನಕ್ಕಳು.

'ಸಿನೆಮಾ ಆದರೂ ಎಷ್ಟು ಚಲೋ ಅವೆ ಅಲ್ಲ! ಗಿರಣಿಗಳ ಕತ್ತಲೆಯಲ್ಲಿ ಹೊಟ್ಟೆಯ ಸಲುವಾಗಿ ಒದ್ದಾಡುವ ಕೂಲಿಕಾರರ ಚಿತ್ರ ಎಷ್ಟು ಸ್ಪಷ್ಟವಾಗಿ ಎದ್ದು ಕಾಣಿಸುವವು'

'ಗೃಹಸ್ಥ ಹುಚ್ಚ ಇದ್ದಾನೆ ತೀರಿತು' ಎಂಬ ದೃಷ್ಟಿಯಿಂದ ರಮಾಕಾಂತ ಬಾಪ್ಪಾ ಅವರ ಕಡೆಗೆ ನೋಡಿದ.

'ಮತ್ತೆ ಚಿತ್ರದ ಪ್ರದರ್ಶನವಾದರೂ ಒಳ್ಳೇ ದರ್ಶನೀಯವಾಗಿದೆ. ಆ ಗಿರಣಿಗಳ ಹೊಗೆ! ತಿಪ್ಪಿಗಳಿಗಿಂತಲೂ ಕಡೆಯಾಗಿರುವ ಕೂಲಿಕಾರರ ಚಾಳುಗಳು! ಗೇಣು ಗೇಣು ಕೋಣೆಗಳಲ್ಲಿಯ ಅವರ ಸಂಸಾರ—'

ಹಾ ಹಾ ಹಾ ಮಾಡಿ ಆಕಳಿಸುತ್ತ ದಾದಾ ಅವರು ಕುಳಿತಲ್ಲಿಂದ ಎದ್ದರು. ಬಾಪ್ಪಾ ಅವರ ಈ ಶೋಕಗೀತವು ಯಾವಾಗಲೂ ಇದ್ದದ್ದೇ ಎಂಬ ಅಭಿಪ್ರಾಯವು ಸ್ಪಷ್ಟವಾಗಿ ಅವರ ಮೋರೆಯ ಮೇಲೆ ಮೂಡಿದ್ದು ರಮಾಕಾಂತನಿಗೆ ಕಾಣಿಸಿತು.

ಮರುದಿವಸ ಹೋಗುವ ಯೋಜನೆಯನ್ನು ದಾದಾ ಅವರು ಏನು ಮಾಡಿದರೂ ಬಿಡಲೊಲ್ಲರು. ಆಗ ರಮಾಕಾಂತನು ಅಂದೇ ಮುಗಿಯು ವಂಥ ಒಂದು ಸಣ್ಣ ಕಾರ್ಯಕ್ರಮ ಮಾಡಿದ. ಮೊದಲು ಕಂಪನಿಯ ಬಿಡಾರಕ್ಕೆ ಹೋಗಿ ರಮಾಕಾಂತನ ನಾಟಕದ ತಾಲೀಮನ್ನು ಸ್ವಲ್ಪ ನೋಡಬೇಕು, ಆ ಮೇಲೆ ಮೋಟಾರಿನಲ್ಲಿ ಮಹಾಲಕ್ಷ್ಮಿಯ ಕಡೆಗೆ ತಿರುಗಾಡಲಿಕ್ಕೆ ಹೋಗಬೇಕು, ರಾತ್ರಿ ಒಂದು ಒಳ್ಳೇ ಚಿತ್ರಪಟವನ್ನು ನೋಡಬೇಕು, ಎಂದು ಸರ್ವಾನುಮತದಿಂದ ನಿಶ್ಚಿತವಾಯಿತು.

* * * *

ಮೋಟರು ಕಂಪನಿಯ ಬಿಡಾರದ ಮುಂದೆ ನಿಂತ ಕೂಡಲೆ ರಮಾಕಾಂತನು ತಟ್ಟನೇ ಕೆಳಗಿಳಿದು ಒಳಗೆ ಹೋಗಿ ಮ್ಯಾನೇಜರರ ಕಿವಿಯಲ್ಲಿ ಏನೋ ಹೇಳಿದ. ಕೂಡಲೆ ಅವರು ಹೊರಗೆ ಬಂದು ಒಳ್ಳೇ ಸಭ್ಯತೆಯಿಂದ ದಾದಾ ಸುಲೋಚನೆಯರ ಸ್ವಾಗತ ಮಾಡಿದರು. ನಾಟಕ ಕಂಪನಿಯ

ಕಾರಖಾನೆಯನ್ನು ತಮ್ಮ ವ್ಯವಸಾಯ–ದೃಷ್ಟಿಯಿಂದ ನೋಡುತ್ತ ನೋಡುತ್ತ ದಾದಾ ಅವರು ತಾಲೀಮಿನ ಕೋಣೆಯಲ್ಲಿ ಬಂದು ಲೋಡಿಗೆ ಆತುಕೊಂಡು ಕೂತರು.

'ಸುರಂಗೆ ಎದ್ದಂತೆ ಕಾಣುವದಿಲ್ಲ ಇನ್ನೂ?' ರಮಾಕಾಂತ ಕೇಳಿದ.

'ನಿನ್ನಿನ ಜಾಗರಣೆ' ಎಂದ ಮ್ಯಾನೇಜರರು ತಡವರಿಸುತ್ತ ಉತ್ತರ ಕೊಟ್ಟರು.

'ನಾಟಕ ಕಂಪನಿಯ ಜನರು ಜಾಗರಣಕ್ಕೆ ಅಂಜುವರೇನು? ಶಂಕರನಿಗೆ ವಿಷ ಏನು ಮಾಡಿತು?' ಎಂದ ರಮಾಕಾಂತ. ನಗುನಗುತ್ತ ಮ್ಯಾನೇಜರರು ಸುರಂಗೆಯನ್ನು ಕರೆಯಲಿಕ್ಕೆಂದು ಹೋದರು.

ದಾದಾ ಅವರು ಕೇಳಿದರು. 'ನಿಮ್ಮ ನಾಟಕ ಎಷ್ಟು ಕೂತಿದೆ ಈಗ?'

'ಎರಡು ಮೂರು ದಿವಸದಲ್ಲಿ ಆದೀತು ರಂಗತಾಲೀಮು'

'ಈ ಸುರಂಗಾ ಅಂದರೆ ಗೋವೆಯ ಕಡೆಯವಳು ಇರಬೇಕು ಬಹುತರವಾಗಿ?'

'ಉಂ ಹುಂ. ಕೊಂಕಣದಲ್ಲಿಯೋ ಎಲ್ಲಿಯವಳೋ ಇದ್ದಾಳೆ. ಇನ್ನೂ ನೋಡಿಲ್ಲವೇನು ನೀವು ಅವಳನ್ನು?'

ಛೇ! ಎಲ್ಲಿಂದ ನೋಡಬೇಕು? ಕಾಮಾಪೂರಕ್ಕೆ ಯಾಕೆ ಬಂದಾವು ನಿಮ್ಮ ಕಂಪನಿ? ಎಂದಾದರೂ ನಾನು ಮುಂಬಯಿಗೆ ಬಂದರೆ ಹುಲಿ ಬೆನ್ನುಹತ್ತಿದವರ ಹಾಗೆ ಬರತೀನಿ ಹೋಗತೀನಿ!'

ಮ್ಯಾನೇಜರರೊಬ್ಬರೇ ತಿರುಗಿ ಬಂದದ್ದನ್ನು ನೋಡಿ ರಮಾಕಾಂತ ಕೇಳಿದ. 'ಯಾಕೆ? ಎದ್ದಿಳೊ ಇಲ್ಲೊ? ಮಧ್ಯಾನ್ಹದಲ್ಲಿ ಬಹಳ ನಿದ್ರೆ ಮಾಡಿದರೆ ನೆಗಡಿ ಆದೀತೆಂದು ಹೇಳಿರಿ.'

'ಎಚ್ಚರವೇ ಇರುವಳು. ಆದರೆ ತಲೆನೋವು ಬಹಳವಾಗಿದೆಯಂತೆ, ಏನೂ ಏಳಗೊಡವೊಲ್ಲದಂತೆ.'

ದಾದಾ ಅವರನ್ನೂ ಸುಲೋಚನೆಯನ್ನೂ ತಾನು ಬೇಕೆಂತಲೆ ಕಂಪನಿಯ ಬಿಡಾರಕ್ಕೆ ಕರೆದುಕೊಂಡು ಬಂದಿರುವಾಗ ಸುರಂಗೆಯು

ಮಲಗಿಬಿಟ್ಟರೆ ಕಂಪನಿಯಲ್ಲಿ ತನ್ನದೇನೂ ವರ್ಚಸ್ಸು ಇಲ್ಲೆಂದೆನಿಸೀತೆಂಬ ವಿಚಾರವು ರಮಾಕಾಂತನ ಮನದಲ್ಲಿ ಬಂದಿತು. ಅವನು ಏಳುತ್ತ 'ನಾನೇ ಹೋಗಿ ನೋಡುವೆ' ಎಂದ.

'ನೋಡಿ ಬರ್ರಿ ಬೇಕಾದರೆ: ಮುಂಜಾನೆಯಿಂದಲೂ ಹೀಗೇ ಹಾಸಿಗೆಯಲ್ಲಿ ಬಿದ್ದುಕೊಂಡು ಇರುವಳು!'

ಹೋಗುವಾಗ ಬೆನ್ನು ತಿರುವಿದ ರಮಾಕಾಂತನ ಕಡೆಗೆ ನೋಡುತ್ತ ಮ್ಯಾನೇಜರರಂದರು—

'ಈ ಕಲಾವಂತರೆಂದರೆ ಹೀಗೆಯೇ, ಲಹರು ಬಂದಂತೆ ಕೆಲಸ ಮಾಡುವವರು! ಹಗಲು ಮಲಗುವದು ರಾತ್ರಿ ಹಾಡುತ್ತ ಕೂಡುವದು ತಮ್ಮೊಳಗೆ ಒಂದು ಕಲೆಯಿದೆ ಎಂಬುದರ ಅರಿವು ಕೂಡ ಅವರಿಗಿರುವದಿಲ್ಲ. ಈ ಸುರಂಗೆಯನ್ನೇ ನೋಡಿರಲ್ಲ! ಈಗ ಆರು ವರ್ಷದ ಹಿಂದೆ ಬೆಳಗಾಂವಿಯೊಳಗೆ ನನಗೆ ಈಕೆ ಸಹಜವಾಗಿಯೇ ಸಿಕ್ಕಳು!'

'ಸಿಕ್ಕಳೇ?'

'ಹೌದು. ಸುದೈವದಿಂದ ಸಿಕ್ಕ ಹಾಗೇ ಸರಿ! ಆ ಊರಲ್ಲಿ ಇರುವವರೆಗೆ ಎಂದು ಒಬ್ಬ ಮುದುಕಿ ಒಕ್ಕಲಗಿತ್ತಿಯನ್ನು ಇಟ್ಟುಕೊಂಡಿದ್ದೆವು—'

ಮುದುಕಿ ಶಬ್ದವನ್ನು ಅರ್ಥಸೂಚಕವಾಗಿ ಮ್ಯಾನೇಜರರು ಉಚ್ಚರಿಸಿದರೆಂದು ದಾದಾ ಅವರಿಗೆ ಹೊಳೆಯಿತು. 'ಆ ಮುದುಕಿಗೆ ಬೀಸಲಿಕ್ಕೆ ಅಥವಾ ಉಳಿದ ಕೆಲಸಗಳಲ್ಲಿ ಸಹಾಯಮಾಡಲಿಕ್ಕೆಂದು ಈಕೆ ಯಾವಾಗಾದರೂ ಬರುತ್ತಿದ್ದಳು. ಬೀಸುವಾಗ ಇಷ್ಟು ಮಧುರವಾಗಿ ಹಾಡುತ್ತಿದ್ದಳು—'

'ಮತ್ತೆ ಅಲ್ಲಿಂದ ಹಾಡಲಿಕ್ಕೆ ಯಾವಾಗ ಕಲಿತಳು.'

'ಕಂಪನಿಯೊಳಗೆ ಬಂದನಂತರವೆ. ಹಾಗಂತೇ ಇಂದಿನವರೆಗೆ ಇಲ್ಲಿಯೇ ಅಂಟಿಕೊಂಡು ನಿಂತಿರುವಳು. ಇಲ್ಲದಿದ್ದರೆ—'

ತಾಲೀಮಿನ ಕೋಣೆಯಲ್ಲಿ ಯಾವ ಸುರಂಗೆಯ ಬಗ್ಗೆ ಈ ಮಾತು ನಡೆದಿತ್ತೋ ಆ ಸುರಂಗೆಯು ತನ್ನ ಕೋಣೆಯಲ್ಲಿ ಪಲಂಗದ ಮೇಲೆ

ಬಿದ್ದುಕೊಂಡಿದ್ದಳು. ಬಿಸಿಲಿನ ತ್ರಾಸವಾಗಬಾರದೆಂದು ಕಿಡಿಕೆಯ ಬಾಗಿಲುಗಳನ್ನು ಹಾಕಿತ್ತು. ರಮಾಕಾಂತನು ಮುಂದೆ ಮಾಡಿದ ಬಾಗಿಲನ್ನು ತೆರೆಯುತ್ತಲೆ 'ಕೋಲನ್ ವಾಟರಿ'ನ ಮಧುರವಾಗಿದ್ದರೂ ಸ್ವಲ್ಪ ಉಗ್ರವಾದ ವಾಸನೆಯು ತನ್ನ ಅಸ್ತಿತ್ವವನ್ನು ಪ್ರಕಟಮಾಡಿತು. ಆ ವಾಸನೆಯು ಸುರಂಗೆಯ ಅಭಿಮಾನೀ-ಸ್ವಭಾವದ ವಾಯುರೂಪಮೂರ್ತಿಯೇ ಎಂದು ಅವನಿಗೆನಿಸಿತು. ಅವನು ಒಮ್ಮೆಲೇ ಬಾಗಿಲಲ್ಲಿ ತಡೆದ.

ತಾನು ಬಂದದ್ದು ತಿಳಿದೂ ಸುರಂಗೆಯು ಎದ್ದು ಬರಲಿಲ್ಲವಲ್ಲ! ಅವಳಿಗೆ ತನ್ನ ಪರಿವೆಯೇ ಇಲ್ಲ. ಅಂದ ಮೇಲೆ ತಾನಾದರೂ ಅವಳಿಗೇಕೆ ಇಲ್ಲದ ಮಹತ್ವ ಕೊಡಬೇಕು! ನಟಿ ಮತ್ತು ನಾಟಕಕಾರ ಎಂಬುದಿಷ್ಟೇ ಅವಳದೂ ತನ್ನದೂ ಸಂಬಂಧ. ಅವಳು ನನಗೇನೂ ಅಲ್ಲ! ನಾನು ಅವಳಿಗೇನೂ ಅಲ್ಲ! ನಾನು ಅವಳನ್ನು ಕರೆಯಲಿಕ್ಕೇಕೆ ಬಂದೆ! ಅವಳೇನು ರಾಜನ ರಾಣಿಯೇ? ಇದನ್ನು ನೋಡಿ ಸುಲೋಚನೆಗೆ ಏನೆನಿಸಿದ್ದೀತು?

ಬಂದಂತೆಯೆ ತಿರುಗಿ ಹೋಗಬೇಕೆಂದು ರಮಾಕಾಂತ ವಿಚಾರಿಸಿದ. ಆದರೆ ತಿರುಗಿ ಹೋಗಿ ಹೇಳಬೇಕೇನು? ಸುರಂಗೆ ಬರುವದಿಲ್ಲೆಂದೇ? ಅವನ ಅಭಿಮಾನಿಯಾದ ಮನಸ್ಸಿಗೆ ಇದು ಹೇಗೋ ಎನಿಸಿತು. ಏನು ಮಾಡಬೇಕೆಂದು ಅವನು ವಿಚಾರ ಮಾಡುತ್ತಿರುವಾಗಲೆ ಬೆನ್ನು ತಿರುವಿ ಮಲಗಿದ ಸುರಂಗೆಯು ಒಂದು ಮಗ್ಗುಲಿಗೆ ಹೊರಳಿದಳು. ಬಾಗಿಲಲ್ಲಿ ಸ್ವಲ್ಪಹೊತ್ತು ನಿಂತಿದ್ದರಿಂದ ಕೋಣೆಯ ಒಳಭಾಗವು ಅವನಿಗೆ ಸ್ಪಷ್ಟವಾಗಿ ಕಾಣಹತ್ತಿತು. ಅವನು ಒಳಗೆ ಬಂದು ಕಣ್ಣುಮುಚ್ಚಿಕೊಂಡು ಮಲಗಿದ ಸುರಂಗೆಯ ಕಡೆಗೆ ದಿಟ್ಟಿಸಿ ನೋಡಹತ್ತಿದ. ಮಂಚದ ಮೇಲಿ ಮೆತ್ತಗಿನ ತಲೆಗಿಂಬಿನ ಒಂದು ಮಗ್ಗಲು ಅವಳ ತಲೆಯ ಭಾರದಿಂದ ಸ್ವಲ್ಪ ಮೇಲಕ್ಕೆದ್ದಿತ್ತು. ತಲೆಗಿಂಬಿನ ಗುಲಾಬೀ ಹೊದಿಕೆ, ಅವಳ ಗೌರವರ್ಣ, ಹಾಗೂ ನಡುನಡುವೆ ಹಾರಾಡುವ ಕರ್‍ರನ್ನ ಕೂದಲುಗಳು ಇವುಗಳ ತ್ರಿವೇಣೀಸಂಗಮವು ಅವನಿಗೆ ಮೋಹಕವೆನಿಸಿತು. ಅರಳಿದ ಕಮಲಕ್ಕಿಂತಲೂ ಅದರ ಮೊಗ್ಗೆಯೇ ಸುಂದರವಾಗಿ ತೋರುತ್ತದೆ. ಅವಳ ಮುಚ್ಚಿದ ಕಣ್ಣು ನೋಡಿ ಅವನಿಗೆ ಇದೇ ಕಲ್ಪನೆ ಬಂದಿತು.

ಅವಳ ತುಟಿಯ ಕಡೆಗೆ ನೋಡಿದ. ಅಧರ ಮೇಲೆ ಯಾವಾಗಲೂ ತೋರುವ ಹುಡುಗಾಟಿಕೆ ಇಂದು ಅವನಿಗೆ ಕಾಣಿಸಲಿಲ್ಲ. ಕುತ್ತಿಗೆಯ ವರೆಗೆ ಹೊದ್ದುಕೊಂಡ ತೆಳುವಾದ ಬಣ್ಣದ ಚಾದರು ಸ್ವಲ್ಪ ಮೇಲೆ ಕೆಳಗೆ ಅಲುಗಾಡುತ್ತಿತ್ತು. ಈ ಸ್ಥಿತಿಯಲ್ಲಿ ಅವನು ಸುರಂಗೆಯನ್ನು ಎಂದೂ ನೋಡಿರಲಿಲ್ಲ. ಸಾಯಂಕಾಲದಂತೆ ರಮ್ಯವಾದ ಮಬ್ಬು ಬೆಳಕಿನಲ್ಲಿ ಅವಳು ಅವನಿಗೆ ಅತ್ಯಂತ ಆಕರ್ಷಕಳಾಗಿ ತೋರಿದಳು. ಸ್ವಲ್ಪ ಮುಂದೆ ಹೋಗಿ 'ಸುರಂಗಾ—' ಎಂದು ಕರೆದ.

ಸುರಂಗೆಯು ಸ್ತಬ್ಧಳಾಗಿದ್ದಳು. ಇದೇ ಈಗ ನಿದ್ದೆ ಹತ್ತಿದ್ದರೂ ಹತ್ತಿರಬಹುದೆಂಬ ವಿಚಾರವೂ ಅವನಿಗೆ ಹೊಳೆದುಹೋಯಿತು. ಮಂಚದ ತೀರ ಸಮೀಪಕ್ಕೆ ಹೋಗಿ ಅವನು ಮತ್ತೆ ಕರೆದ'ಸುರಂಗಾ'–ಎಂದು.

ತನ್ನ ಸ್ವರದೊಳಗಿನ ಅಂತರದ ಅರಿವು ಅವನಿಗೂ ಆಯಿತು. ಸುರಂಗೆಯ ತಲೆಯಲ್ಲಿಯ ಗುಲಾಬಿಯ ಮಧುರ ಗಂಧವು ತನ್ನನ್ನು ಸವಿಯಾಗಿ ಮೈಮರೆಸುತ್ತಿದೆ ಎಂದು ಅವನಿಗೆ ಭಾಸವಾಯಿತು. ಈಗೆರಡು ತಿಂಗಳಿಂದ ಅವನು ತನ್ನ ಪ್ರೇಮವು ಪ್ಲೆಟಾನಿಕ್ (Platonic) ಅದೆ, ಕೇವಲ ಕಲಾತ್ಮಕವಾಗಿದೆ ಎಂದು ತನ್ನ ಮನಸ್ಸಿಗೆ ಹೇಳುತ್ತಿದ್ದ. ಆದರೆ ಆ ಗುಲಾಬಿಯ ಉನ್ಮಾದದ ಗಂಧವು ಅವನ ತಲೆಯಲ್ಲಿಯ ಪ್ಲೇಟೋನ ತತ್ವಜ್ಞಾನವನ್ನು ಎತ್ತಲೋ ಓಡಿಸಿಬಿಟ್ಟಿತು. ಅವನು ಹಿಂದೆ ಹೊರಳಿ ತಾನು ಸ್ವಲ್ಪ ತೆರೆದುಬಿಟ್ಟ ಬಾಗಿಲ ಹತ್ತಿರ ಯಾರಾದರೂ ಇರುವರೇನೊ ಎಂದು ನೋಡಿದ. ಕೂಡಲೆ ಮೋರೆ ಹೊರಳಿಸಿ ಬಾಗಿದ. ಅನನುಭೂತವಾದ ಆನಂದವೂ ಭೀತಿಯೂ ಅವನ ರೋಮರೋಮದಲ್ಲಿ ಕುಣಿಯತೊಡಗಿದವು. ಇನ್ನು—

**'ಒಬ್ಬ ಸ್ತ್ರೀಯ ಆತ್ಮಹತ್ಯೆ !'** ಬೀದಿಯಲ್ಲಿ ವರ್ತಮಾನ ಪತ್ರ ಮಾರುವ ಒಬ್ಬ ಹುಡುಗನ ಕರ್ಕಶವಾದ ಕೂಗು ಅವನ ಕಿವಿಗೆ ಬಿತ್ತು. ಹಗ್ಗವೆಂದು ಹಿಡಿಯ ಹೋದದ್ದು ಹಾವಾದರೆ ಬೆಚ್ಚುವಂತೆ ರಮಾಕಾಂತನು ತಟ್ಟನೆ ಹಿಂದೆ ಸರಿದ. ವತ್ಸಲೆಯು ಆತ್ಮಹತ್ಯೆ ಮಾಡಿಕೊಂಡಳೇ ? ಅವನ ತಲೆ ಗರಗರನೆ ತಿರುಗಹತ್ತಿತು. ಅವನು ಸುರಂಗೆಯ

ಕಡೆಗೆ ನೋಡಿದ. ಅವಳು ಕಣ್ಣು ತೆರೆದು ಕಿಡಿಗೇಡಿತನದಿಂದ ನಗುತ್ತಿದ್ದಳು.

'ನೀನು ಎಚ್ಚರವೇ ಇದ್ದೆಯೆಂದು ಕಾಣುತ್ತದೆ?'

'ಛೇ! ಇದೇ ಈಗ ಎಚ್ಚರಾದೆ'

'ಆ ಹುಡುಗ ಒದರಿದ್ದಕ್ಕೆ?'

'ಉಂ ಹುಂ. ಹೀಗೇ ಒಬ್ಬರು ಅಂಜಿದ್ದಕ್ಕೆ!'

ರಮಾಕಾಂತ ತನ್ನೊಳಗೆ ತಾನು ನಾಚಿದ. ಆದರೆ ಅವನ ಸಮಯ ಸೂಚಕತೆಯೇನೂ ಕಡಿಮೆಯಿರಲಿಲ್ಲ.

'ನಿನ್ನ ನಿದ್ದೆ ಕೆಡಬಾರದೆಂದು—'

'ನಾಟಕಕಾರರೇ ಇರುವಿರಿ ನೀವು'

'ಮತ್ತ ನೀನು ಕುಶಲ ನಟಿಯೇ ಇರುವಿ.'

ಸುರಂಗೆ ನಸುನಗುತ್ತ ಹಾಸಿಗೆಯ ಮೇಲೆ ಎದ್ದು ಕುಳಿತಳು.

'ತಲೆ ಬಹಳ ನೋಯುತ್ತದೇನು?'

'ಹೌದು—'

'ಏನಾಯ್ತು ಇಷ್ಟು ನೋಯಿಸಲಿಕ್ಕೆ?'

'ಏಟು ಬಿದ್ದಿದೆ ಅಂಥಾದ್ದು!'

'ಯಾವಾಗ?

'ನಿನ್ನೆ ರಾತ್ರಿ'

ಈಗ ರಮಾಕಾಂತನ ಲಕ್ಷ್ಯಕ್ಕೆ ಬಂತು. ತಾನು ನಿನ್ನೆ ಸುಲೋಚನೆಯ ಮೋಟರಿನಲ್ಲಿ ಕುಳಿತು ಹೋದದ್ದಕ್ಕೆ ಇದೆಲ್ಲ ತಿರುಗುಪ್ಪೆಂದು ಅವನಿಗೆ ಗೊತ್ತಾಯಿತು.

'ಹೊರಗೆ ಬರುವಿಯಾ ಸ್ವಲ್ಪ? ಆ ಸುಲೋಚನಾ ಮತ್ತು ಅವರ ತಂದೆ ಬಂದಿರುವರು'

'ಅವರ ತಂದೆ ಬರಲಿ, ತಂದೆಯ ತಂದೆ ಬರಲಿ! ನನಗೇನು ಅವರ ಕೂಡ ಲಗ್ನ ಮಾಡಿಕೊಳ್ಳುವದು ಅಷ್ಟರಲ್ಲೇ ಅದೆ!'

'ನನಗಾದರೂ ಅವರನ್ನು ತಗೊಂಡು ಏನು ಮಾಡಬೇಕಾಗಿದೆ?'

'ಅವರ ಅಳಿಯಂದಿರಾಗಬೇಕೆಂದು ಇರಬಹುದು ಮನಸ್ಸಿನಲ್ಲಿ!'

'ನಿನಗೆ ಏಟು ಬಿದ್ದದ್ದು ಸರಿ ಮಾಡಲಿಕ್ಕೆ ನಾನು ಒಪ್ಪುತ್ತೇನೆ. ಅಲ್ಲಿಂದಾದರೂ ಆಯಿತಲ್ಲಾ?' ಹೊರಗೆ ಎಲ್ಲರೂ ತನ್ನ ಹಾದೀ ನೋಡು ತ್ತಿರಬಹುದೆಂಬದು ಲಕ್ಷ್ಯಕ್ಕೆ ಬಂದು ರಮಾಕಾಂತ ಹೇಳಿದ.

'ನಿನ್ನೆ ರಾತ್ರಿ ನನ್ನದೊಂದು ಪತ್ರ ಕಳೆದು ಹೋಯಿತು!'

'ಯಾರಿಗೆ ಬರೆದಿದ್ದು?'

'ನಿಮಗೆ!'

'ಮತ್ತೆ ಕೊಡಲಿಲ್ಲವೇಕೆ?'

'ಕೊಡಬೇಕೆಂತೇ ಜುಹೂಕ್ಕೆ ಹೋಗುವ ಹಟ ಹಿಡಿದದ್ದು.'

'ಎಲ್ಲಿ ಬಿದ್ದು ಹೋಯಿತು ಅದು?'

'ಉಸುಕಿನಲ್ಲಿ ಎಲ್ಲಿಯಾದರೂ ಬಿದ್ದುಹೋಗಿರಬೇಕು.'

'ರಾತ್ರಿ ಮಾತಾಡದೆ ಸುಮ್ಮನೆ ಕುಳಿತದ್ದಕ್ಕೆ ಒಳ್ಳೇ ಶಿಕ್ಷೆ ಆಯಿತು!'

'ಇರಲಿ. ಅದು ಮತ್ತೆ ಯಾರ ಕೈಯಲ್ಲಿಯಾದರೂ ಬಿದ್ದರೆ ಹೇಗೆ?'

'ಗಾಳಿಯ ಕೈಯಲ್ಲಿ ಸಿಕ್ಕಿದ್ದೀತು! ಅಲ್ಲೇ ಬಿದ್ದರೆ ಬೀಳಲಿ. ಯಾರದಾದರೂ ಕೊಲೆ–ಗಿಲೆ ಮಾಡುವ ವಿಚಾರವೇನು ಅದರಲ್ಲಿ ಇದ್ದಿಲ್ಲ ವಲ್ಲಾ?'

ಸುರಂಗೆಯು ಬರುವಳೆಂದು ಹೇಳಲಿಕ್ಕೆ ರಮಾಕಾಂತ ಮುಂದೆ ಹೋದ. ರಸ್ತೆಯ ಮೇಲೆ ಒದರುತ್ತ ಹೋಗುವ ಹುಡುಗನಿಂದ ಮ್ಯಾನೇಜರರು ಒಂದು ಪ್ರತಿಯನ್ನು ಮೊದಲೇ ಕೊಂಡಿದ್ದರು. ರಮಾ ಕಾಂತ ಬರುತ್ತಲೇ ದಾದಾ ಅವರು ಅಂದರು. 'ಇದನ್ನು ನೋಡಿದಿ ರೇನು ಸುದ್ದಿ?'

ರಮಾಕಾಂತನ ಮೈಗೆ ಮುಳ್ಳು ಬಂದಂತೆಯೆ ಆಯಿತು. ದಾದಾ ಅವರು ಓದ ಹತ್ತಿದರು.

'ದಾದರದಲ್ಲಿರುವ ಇಪ್ಪತ್ತಾರುವರ್ಷದ ಒಬ್ಬ ಬ್ರಾಹ್ಮಣ ಸ್ತ್ರೀಯು ಮೈಮೇಲೆ ಚಿಮಣಿ ಎಣ್ಣೆಯನ್ನು ಸುರುವಿಕೊಂಡು ಸುಟ್ಟುಕೊಂಡಳು. ಆತ್ಮಹತ್ಯೆಯ ನಿಜವಾದ ಕಾರಣವು ಇನ್ನೂ ತಿಳಿದಿಲ್ಲ.'

ರಮಾಕಾಂತನು ಸಮಾಧಾನದಿಂದ ಉಸಿರ್ಗರೆದ. ಮ್ಯಾನೇಜರರು ಎದ್ದು ಒಳಗೆ ಹೋದರು. ಸುರಂಗೆಯು ಮೋರೆತೊಳೆದುಕೊಂಡು ಪತ್ತಲವನ್ನು ಬದಲಿಸಿ ಹೊರಗೆ ಬರಲಿಕ್ಕೆ ಹೊರಟಿದ್ದಳು. ಆವಳಿಗೆ ಆವ ರಂದರು: 'ಈಗ ಬಂದವರಿವರು ಬಹಳ ಶ್ರೀಮಂತರಿದ್ದಾರಂತೆ.'

ಸುರಂಗೆಯು ಏನೂ ಮಾತಾಡಲಿಲ್ಲ. ಒಳಗಿನಿಂದ ಅಡಿಗೆಯವನು ತಬಕದಲ್ಲಿ ಚಹದ ಐದು ಕಪ್ಪುಗಳನ್ನು ಇಟ್ಟುಕೊಂಡು ಬಂದ. ಅದ ರಲ್ಲಿಯ ಒಂದನ್ನು ಸುರಂಗೆಯ ಕೈಯಲ್ಲಿ ಕೊಡುತ್ತ ಮ್ಯಾನೇಜರ ಅಂದರು: 'ಇದನ್ನು ನೀನೇ ಒಯ್ದು ಕೊಡು ಅವರಿಗೆ.' ಸುರಂಗೆಯು ತೀವ್ರದೃಷ್ಟಿಯಿಂದ ಮ್ಯಾನೇಜರರನ್ನು ನೋಡಿದಳು. ಅಡಿಗೆಯವನು ತಬಕ ತಕ್ಕೊಂಡು ಮುಂದೆ ಹೋದ. ಸುರಂಗೆಯೆಂದಳು—'ಇಂಥಾ ದ್ದೇನೂ ನನಗೆ ಸರಿ ಬರುವದಿಲ್ಲ' ನೋಡಿರಿ!

'ಬೆಳದಿಂಗಳಿನಲ್ಲಿ ತಿರುಗಾಡಲಿಕ್ಕೆ ಹೋಗುವದು ಮಾತ್ರ ಸರಿ ಬರುವದಲ್ಲವೆ?' ಸುರಂಗೆಯ ಮರ್ಮಕ್ಕೆ ಏಟು ತಾಕಿತು.

'ಸುರಂಗಾ! ಆರುವರ್ಷದ ಹಿಂದಿನ ಕಥೆ ನಿನಗೆ ನೆನಪಿದೆಯೇನು? ನೀನು ಕಂಪನಿಯೊಳಗ ಬೀಸಲಿಕ್ಕೆ ಬರುತ್ತಿದ್ದಿ—'

ಸುರಂಗೆಯು ಮೌನದಿಂದ ಕಪ್ಪು ತಕ್ಕೊಂಡು ಹೊರಟಳು. ಅವಳು ಕೆಳಗೆ ನೋಡುತ್ತಲೇ ಕೋಣೆಯಲ್ಲಿ ಹೋದಳು. ಎದುರಿನ ಲೋಡಿಗೆ ಆತುಕೊಂಡು ಯಾವನೋ ಒಬ್ಬ ಪ್ರೌಢಗೃಹಸ್ಥನು ಕುಳಿತಿರುವನೆಂದು ಮಾತ್ರ ಅವಳ ಕೆಳನೋಟಕ್ಕೆ ಕಾಣುತ್ತಿತ್ತು. ಅವನ ಕೈಯಲ್ಲಿ ಕಪ್ಪು ಕೊಡಬೇಕೆಂದು ಬಾಗಿ ಅವನ ಮೋರೆಯನ್ನು ನೋಡಿದಳು—'

ಅವಳ ಕೈಯೊಳಗಿನ ಕಪ್ಪುಬಸಿಗಳು ಪಳ್ಳನೇ ಕೆಳಗೆ ಬಿದ್ದವು. ಆ ಕಪ್ಪು ಮಾತಾಡಿದಂತೆಯೇ ಆಯಿತು. ದಾದಾ ಆವರು ಸುರಂಗೆಯ ಕಡೆಗೆ ಬಂದು ಕ್ಷಣ ಮಾತ್ರ ನೋಡಿದರು. ಅವರ ಮೋರೆಯು ತೀರ ಇಳಿದು ಹೋಗಿತ್ತು. ಸುರಂಗೆಯಂತೂ ಥರಥರ ನಡುಗುತ್ತಲೇ ಒಳಗೆ ಹೋದಳು.

'ಸಾವಿರ ಜನರ ಮುಂದೆ ಕೆಲಸ ಮಾಡುವಾಗ ಇವಳಿಗೆ ಅಂಜಿಕೆ ಬರುವದಿಲ್ಲ, ಅದೇ ಇಂದು—'

ಮ್ಯಾನೇಜರರು ಎಲ್ಲವನ್ನೂ ಸಪಾರಮುಪಾರ ಮಾಡಿದರು.

'ವಿಪರೀತ ತಲೆಶೂಲಿ ಎದ್ದಿದೆ ಆಕೆಗೆ' ಎಂದ ರಮಾಕಾಂತ.

ಚಹಾಪಾನವನ್ನು ಮುಗಿಸಿ ಎಲ್ಲರೂ ಕಂಪನಿಯ ಬಿಡಾರದಿಂದ ಹೊರಬಿದ್ದರು. ಆದರೆ ದಾದಾ ಅವರು ತಮಗೆ ನೆಟ್ಟಗೆನಿಸುವದಿಲ್ಲವೆಂದ ಕಾರಣ ತಿರುಗಾಡಲಿಕ್ಕೆ ಹಾಗೂ ಸಿನೆಮಾಕ್ಕೆ ಹೋಗುವ ಕಾರ್ಯಕ್ರಮವು ನಿಂತುಹೋಯಿತು.

---

೬

# ದೇವ ಮತ್ತು ಭಾವ

ರಮಾಕಾಂತನ ನಾಟಕದ ರಂಗತಾಲೀಮು ಇಷ್ಟು ನೆಟ್ಟಗಾಯಿತಲ್ಲ, ಮರುದಿವಸ ಮಧ್ಯಾಹ್ನ ನಾಟಕವು ಯಾವಾಗ ಸುರುವಾದೀತೋ ಪ್ರೇಕ್ಷಕರ ಕರತಾಡನವು ಯಾವಾಗ ತನ್ನ ಕಿವಿಗೆ ಬಿದ್ದೀತೋ ಎಂದು ಅವನು ಆತುರನಾಗಿದ್ದನು. ನಾಟಕದ ಮೊದಲನೇ ಪ್ರಯೋಗವು ಮುಗಿಯಿತೆಂದರೆ ದಾದಾ ಅವರಿಗೆ ಬೇಕಾದ ಚಿಕ್ಕ ಪುಸ್ತಕವನ್ನು ಬರೆಯುವದಕ್ಕೆಂದು ಅವನು ಕಾಮಾಪುರದ ಗೇರುಹಣ್ಣಿನ ಕಾರಖಾನೆಯನ್ನು ನೋಡಲು ಹೋಗುವದೆಂದು ನಿಶ್ಚಿತವಾಗಿತ್ತು. ಕಾಮಾಪುರದಲ್ಲಿ ಮತ್ತೇನೂ ನೋಡುವಂತಹದಿರದಿದ್ದರೂ ದಾದಾ ಅವರು ತಮ್ಮ ತಂದೆಯ ಸ್ಮರಣಾರ್ಥವಾಗಿ ಕಟ್ಟಿಸಿದ ಭವ್ಯವಾದ ದೀಪಮಾಲೆ, ದೇವಾಲಯದ ಹತ್ತಿರವೇ ಇದ್ದ ಒಂದು ಕೆರೆ ಇವೆರಡು ಮಾತ್ರ ಇವೆಯೆಂದು ಸುಲೋಚನೆಯು ಹೇಳಿದ್ದಳು. ಸುಲೋಚನೆಯ ಸಹವಾಸದಲ್ಲಿ ದೀಪಮಾಲೆಯ ಮೇಲೆಯೂ ಕೆರೆಯ ಮೇಲೆಯೂ ಸಂಧ್ಯಾಕಾಲವು ಎಷ್ಟು

ರಹಸ್ಯ ಕಂಡೀತೆಂಬದರ ಕಲ್ಪನಾಚಿತ್ರಗಳನ್ನು ಅವನು ಮೇಲಿಂದ ಮೇಲೆ ತೆಗೆಯುತ್ತಿದ್ದ. ನಾಟಕದ ಗೊಂದಲದಲ್ಲಿಯೂ ಈ ಆನಂದದ ಭರದಲ್ಲಿಯೂ ಅವನಿಗೆ ಬಹುತೇಕವಾಗಿ ವತ್ಸಲೆಯ ನೆನಪು ಕೂಡ ಆಗುತ್ತಿದ್ದಿಲ್ಲ. ರಾತ್ರಿ ಹಾಸಿಗೆಯಲ್ಲಿ ಮಲಗಿದ ಮೇಲೆ ಮಾತ್ರ ಅವನ ಮನದಲ್ಲಿ ಒಮ್ಮೆಲೆ ವಿಚಾರ ಸುಳಿಯುತ್ತಿತ್ತು. ವತ್ಸಲೆಯ ಗತಿ ಏನಾಗಿರಬಹುದು? ಅವಳು ತನ್ನ ಸೋದರಮಾವನ ಕಡೆಗೆ ಹೋದಳೋ ಏನು ಜೀವ ಕೊಟ್ಟಳೊ! ಅವಳ ಬಗ್ಗೆ ತಾನು ವಿಚಾರಿಸಬೇಕಲ್ಲವೇ? ಆದರೆ ಬೆಳಗಾಗುತ್ತಲೇ ನಕ್ಷತ್ರಗಳಂತೆ ಈ ವಿಚಾರಗಳು ಎಲ್ಲಿಯೋ ಅಡಗಿಬಿಡುತ್ತಿದ್ದವು.

ಮೊದಲನೇ ಪ್ರಯೋಗವನ್ನು ಒಂದು ಅಕ್ಷರ ಕೂಡ ಹಾರಿಸದೆ ಮಾಡತಕ್ಕದ್ದೆಂದು ನಿಶ್ಚಯವಾಗಿತ್ತು. ಆದ್ದರಿಂದ ನಾಟಕವು ಮಧ್ಯಾಹ್ನ ಮೂರುವರೆ ಗಂಟೆಗೆ ಸುರುವಾಗುವದಿತ್ತು. ರಮಾಕಾಂತನು ಎರಡು ಗಂಟೆಗೇ ಥೇಟರಿಗೆ ಬಂದ. ಸುರಂಗೆ ಬಣ್ಣ ಹಚ್ಚಿಕೊಳ್ಳುತ್ತಿದ್ದಳು. ಅವನು ಅವಳಿಗಂದ–'ನನ್ನ ದೈವವೆಲ್ಲಾ ನಿನ್ನ ಕೈಯೊಳಗಿದೆ ಸುರಂಗಾ!'

'ಮತ್ತೆ ನನ್ನದು?' ಎಂಬ ಪ್ರಶ್ನೆಯು ಸುರಂಗೆಯ ತುದಿನಾಲಿಗೆಗೆ ಬಂದಿತ್ತು. ಆದರೆ ಅದನ್ನು ಕೇಳುವ ಧೈರ್ಯ ಅವಳಿಗಾಗಲಿಲ್ಲ. ಅರ್ಧ ಮರ್ಧ ಬಣ್ಣ ಹಚ್ಚಿದ ತನ್ನ ಮೋರೆಯನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತ ಅವಳು ಕೇಳಿದಳು—

'ನನ್ನ ಕೈಗುಣ ಒಳ್ಳೆಯದಾದರೆ ಇನಾಮು ಏನು ಕೊಡುವಿರಿ?'

'ಏನು ಬೇಡಿದ್ದು'

'ನೋಡಿರಿ ಆಂ! ಅವಸರದಿಂದ ಮಾತು ಕೊಡಬೇಡಿರಿ. ಇಲ್ಲದಿದ್ದರೆ—'

ಅವಳು ಅವಸರವಸರದಿಂದ ಬಣ್ಣ ಹಚ್ಚಿಕೊಳ್ಳಹತ್ತಿದಳು. ಆ ಬಣ್ಣದ ಕಡೆ ನೋಡುತ್ತಲೆ ರಮಾಕಾಂತನ ಮನಸ್ಸು ತಿರುಗಹತ್ತಿತು. ಸುರಂಗೆ ರೂಪವತಿಯಿದ್ದಾಳೆ, ಗೌರವರ್ಣದವಳಿದ್ದಾಳೆ; ಆದರೆ ರಂಗಸ್ಥಳದ ಮೇಲೆ ಹೋಗುವ ಮೊದಲು ಅವಳಿಗೂ ಬಣ್ಣ ಹಚ್ಚಿಕೊಳ್ಳಬೇಕಾಗುತ್ತದೆ. ಸಮೀಪದಿಂದ ಈ ಬಣ್ಣ ಹಚ್ಚಿಕೊಂಡವರು ಹೇಗೆ ಬೂದಿಯನ್ನು

ಬಳಿದುಕೊಂಡಂತೆ ತೋರುತ್ತಾರೆ? ಅದೇ ದೂರದಿಂದ? ಪ್ರೇಕ್ಷಕರಿಗೆ ಇದೇ ಬಣ್ಣವು ಚಂದವಾಗಿ ಕಾಣುವದಿಲ್ಲವೆ? ಈ ಜಗವೂ ಒಂದು ರಂಗ ಭೂಮಿ. ಈ ರಂಗಭೂಮಿಯ ಮೇಲೆ ಕೆಲಸ ಮಾಡುವವರು ಯಾವ ಬಣ್ಣವನ್ನು ಹಚ್ಚಿಕೊಳ್ಳುತ್ತಾರೆ? ಕಲೆ ಹಾಗು ಸೌಂದರ್ಯ ಇವುಗಳ ಕಲ್ಪನೆಯೇ ಆ ಬಣ್ಣವಲ್ಲವೆ?

ಒಬ್ಬ ಆಳು ಸುಲೋಚನೆಯು ಬಂದಳೆಂದು ತಿಳಿಸಿದ. ಅವಳನ್ನು ಸ್ವಾಗತಿಸಲಿಕ್ಕೆಂದು ರಮಾಕಾಂತನು ಪಡದೆಯ ಹೊರಗೆ ಬಂದ. ಆತನು ಸುಲೋಚನೆಯ ಕಡೆಗೆ ನೋಡಿದ. ಒಳಗೆ ನಾಯಿಕೆಯ ಪಾತ್ರಕ್ಕಾಗಿ ಬಣ್ಣ ಹಚ್ಚಿಕೊಳ್ಳುತ್ತಿದ್ದ ಸುರಂಗೆಗಿಂತ ಇವಳೇ ಅವನಿಗೆ ಹೆಚ್ಚು ಚೆಲುವೆಯಾಗಿ ತೋರಿದಳು. ಗಾಳಿಯಿಂದ ಅಸ್ತವ್ಯಸ್ತವಾದ ಅವಳ ಕೂದಲು ಪಡದೆಯ ಹಿಂಭಾಗದಲ್ಲಿ ತಿದ್ದಿ ತೀಡಿ ಮಾಡಿಸಿದ ಸುರಂಗೆಯ ಕೂದಲಿಗಿಂತಲೂ ಹೆಚ್ಚು ಆಕರ್ಷಕವಾಗಿ ತೋರುತ್ತಿದ್ದವು. ಸುಲೋಚನೆಯನ್ನು ಸ್ವಾಗತಿಸಲಿಕ್ಕೆ ರಮಾಕಾಂತನು ವಿನೋದದಿಂದ ನುಡಿಯು ವಷ್ಟರಲ್ಲಿ ಕೈಯೊಳಗಿನ ವರ್ತಮಾನಪತ್ರವನ್ನು ಅವನ ಕೈಯಲ್ಲಿ ಕೊಡುತ್ತ ಅವಳಂದಳು—

'ನೋಡಿರುವಿರೇನು ಈ ಸಂಚಿಕೆಯನ್ನು?'

'ನಾಟಕದ ಮೇಲೆ ಏನಾದರೂ ಟೀಕೆ ಬಂದಿರುವದೇ?'

'ಉಂ..ಹುಂ! ಕಥೆ ಅದೆ!'

'ವರ್ತಮಾನಪತ್ರದೊಳಗಿನ ದರಿದ್ರ ಕಥೆ ಓದಲಿಕ್ಕೆ ವೇಳೆ ಯಾರಿಗಿದೆ'

'ವಿದ್ಯಾಧರರಿಗೆ!

'ಅಂದರೆ?'

'ಕಥೆಯನ್ನು ನಾನೇನೂ ಹುಡುಕಿ ತೆಗೆದಿಲ್ಲ. ಈ ಸಂಚಿಕೆಯನ್ನು ತಾವಾಗಿ ವಿದ್ಯಾಧರ ಅವರು ಕಳಿಸಿರುವರು'

'ಎಲ್ಲಿಂದ?'

'ಕಾಮಾಪುರದಿಂದ'

'ಒಳ್ಳೇ ರಸಿಕ ಕಾಣುತ್ತದಲ್ಲ ಸ್ವಾರಿ! ಬಹಳವಾಡಿ ಗೇರಿನ ಕಾರಖಾನೆಯೊಳಗೆ ಕೆಲಸ ಮಾಡುವ ಕೂಲಿಯಾಕೆಯ ಕಥೆ ಇದ್ದೀತು'

'ಉಂ..ಹುಂ! ನಮ್ಮ ನಿಮ್ಮದೇ ಅದೆ. ನಿಮ್ಮ ಆ 'ಭಾವದಂತೆ ದೇವ' ಎಂಬ ಕಥೆಯನ್ನು ನಾನು ಅವರಿಗೆ ಓದಲಿಕ್ಕೆ ಕೊಟ್ಟಿದ್ದೆ'

'ಅಂದರೆ, ಅದರದೇನು ಸಂಬಂಧ ಇದಕ್ಕೆ?'

ನಿಮ್ಮ ಕಥೆಗೆ ತೀರ ವಿರುದ್ಧವಾಗಿದೆ ಇದು. ಈ ಹೆಂಗಸು ಅನ್ನುತ್ತಾಳೆ—'ದೇವರಂತೆ ಭಾವ' ಎಂದು.

'ಕಥೆ ಬರೆದವಳು ಹೆಂಗಸೇನು? ಬುರುಖೆಯೊಳಗಿನವಳಾಗಿರಬೇಕು ಬಹುತರವಾಗಿ ಇವಳು!' ಅದನ್ನು ತೆರೆಯುತ್ತ ರಮಾಕಾಂತ ನುಡಿದ. ಕಥೆಯ ಹೆಸರಿನ ಕೆಳಗೆ ನೋಡಿದ 'ಲೇಖಿಕಾ—ಕೃಷ್ಣಾ'

'ಓದಿಯಾದರೂ ನೋಡಿರಿ. ಅಷ್ಟೇನೂ ಕೆಟ್ಟದಾಗಿಲ್ಲ ಕಥೆ!'

ಸುಲೋಚನೆಯು ನಾಟಕದ ಮೊದಲನೇ ಪ್ರವೇಶದ ರಂಗವ್ಯವಸ್ಥೆಯು ನಡೆದದ್ದನ್ನು ನೋಡುತ್ತ ಕುಳಿತಳು. ರಮಾಕಾಂತನು ಖುರ್ಚಿಯ ಮೇಲೆ ಕುಳಿತು ಮನಸ್ಸಿನಲ್ಲಿಯೆ ಓದತೊಡಗಿದ. ಕಥೆಯ ನಾಯಿಕೆಯಾದ ಶಾಂತಾ ಎಂಬವಳು ಲಗ್ನವಾಗುವ ಮೊದಲು ಪತಿ ಎಂದರೆ ದೇವರೆಂದು ತಿಳಿದಿರುತ್ತಾಳೆ. ಆದರೆ ಲಗ್ನದ ತರುವಾಯ ಅವಳಿಗೆ ಕೆಲವು ತೀರ ಕಟು ಅನುಭವಗಳು ಬರಲು ವಿಧವೆಯಾದ ಮೇಲೆ ಅವಳು ಒಂದು ಕಥೆಯಲ್ಲಿ ಬರೆಯುತ್ತಾಳೆ—'ಪತಿಯೊಡನೆ ಏಕಜೀವವಾದ ಪತ್ನಿಗೆ ವೈಧವ್ಯವೆಂದರೆ ಮರಣವೆನಿಸುತ್ತಿದ್ದೀತು. ಆದರೆ ಪತಿಯ ನಿರ್ದಯ ವರ್ತನದಿಂದ ಯಾವಳ ಜೀವವು ಅರ್ಧ ಮೃತವಾಗಿರುವದೋ ಅವಳಿಗೆ ವೈಧವ್ಯವು ಪುನರ್ಜನ್ಮವೆಂದೇ ಎನಿಸುತ್ತದೆ'

ಕಥೆಯು ಹೀಗೆ ಕೊನೆಯಾಗಿತ್ತು—'ಶಾಂತೆಯು ಚಹಾ ಕೊಡುತ್ತಿರುವಾಗ ಅವಳ ಮೋರೆ ನನ್ನ ಕಣ್ಣಿಗೆ ಬಿತ್ತು. ಆ ದಿವಸವೂ ಅವಳು ಇದರಂತೆಯೆ ಚಹ ಕೊಟ್ಟಿದ್ದಳು. ಅದೇ ಈ ಖೋಲಿ. ಆದರೆ ಈಗ ಪೆಟ್ಟಿಗೆಯ ಮೇಲೆ ಪ್ರೀತಿಯ ನಾಯಿ ಇಲ್ಲ, ಶಾಂತೆಯ ಹಣೆಯ ಮೇಲೆ ಕುಂಕುಮ ತಿಲಕವಿಲ್ಲ, ಅವಳ ಹೃದಯದಲ್ಲಿ ಪತಿಯೇ ದೇವರು ಎಂಬ

ಭಾವನೆಯೂ ಇಲ್ಲ. ಶಾಂತೆಯು ಶಾಲೆಯಲ್ಲಿ 'ಭಾವದಂತೆ ದೇವ' ಎಂಬ ಗಾದೆಯ ಮಾತನ್ನು ಕಲಿತಿದ್ದಳು. ಆದರೆ ಅನುಭವವು ಅವಳ ಹೃದಯದಲ್ಲಿ 'ದೇವನಂತೆ ಭಾವ'ವೆಂಬ ಹೊಸ ಗಾದೆಯನ್ನು ಕೊರೆದು ಬಿಟ್ಟಿತ್ತು.'

ಕಥೆಯನ್ನೋದಿ ಮುಗಿಸಿದ ಕೂಡಲೆ ರಮಾಕಾಂತನು ಮೇಲೆ ನೋಡಿದ. ಕಥೆಯಲ್ಲಿಯಲ್ಲಿಯ ಶಾಂತಾ, ನಾಯಿಗಳ ಮೇಲಿನ ಅವಳ ಪ್ರೀತಿ, ಗಂಡನಿಗೆ ಅವಳ ಬಗ್ಗೆ ಇದ್ದ ತಿರಸ್ಕಾರ— ಅವನಿಗೆ ಒಮ್ಮೆಲೆ ವತ್ಸಲೆಯ ನೆನಪಾಯಿತು. ಅವನು ಸಹಜವಾಗಿ ಕಥೆಯ ಕೆಳಗೆ ನೋಡಿದ. **"ಗೃಹ್ಯ ಸಂಸ್ಕಾರ!"** ಕಥೆಯ ಬಗ್ಗೆ ಚೇಷ್ಟೆ ಮಾಡಲಿಕ್ಕೆ ಒಳ್ಳೇ ಸಾಧನವು ಕೈಗೆ ಸಿಕ್ಕಿತೆಂದು ಅದನ್ನು ಓದಹತ್ತಿದ. ಆದರೆ ಕ್ಷಣಾರ್ಧ ದಲ್ಲಿ ಅವನ ಮೋರೆಯ ಮೇಲೆ ಆಶ್ಚರ್ಯವು ಮೂಡಿತು. ಆ 'ಗೃಹ್ಯ ಸಂಸ್ಕಾರ'ವನ್ನು ವತ್ಸಲೆಯ ಸೋದರಮಾವನು ಕೊಟ್ಟಿದ್ದನು. ಸಾಂಗಲಿಯಲ್ಲಿ ಅವಳಿಗೆ ಜ್ವರಬಂದು ತೀರಿಕೊಂಡ ಸುದ್ದಿ ಅದರಲ್ಲಿತ್ತು. ಆ ದಿವಸ ರಾತ್ರಿ ಸಂತಾಪದಿಂದ ವತ್ಸಲೆ ಹೊರಟು ಹೋಗಲು ಮುಂದೆ ಅದರಿಂದಲೇ ಜ್ವರಬಂದು ಅವಳು ಸತ್ತಿರಬೇಕೆಂಬ ವಿಚಾರವು ಅವನ ಮನದಲ್ಲಿ ಬಂತು. ಆದರೆ ಕೂಡಲೆ ಅವನ ಮನಸ್ಸು ಇಬ್ಬಗೆಯಾಯಿತು. ಎರಡನೇ ಮನವು ಮೆಲ್ಲನೆ ಹೇಳಿತು—

'ಅವಳು ಜ್ವರಬಂದು ಸಾಯಲಿಲ್ಲ!'

'ಇಲ್ಲದಿದ್ದರೆ?' ಎಂದು ಮೊದಲನೆಯದು ಕೇಳಿತು.

'ಅವಳ ಕೊಲೆ ಆಯಿತು!'

'ಕೊಲೆ? ಮಾಡಿದವರು ಯಾರು?'

'ನೀನು! ರಮಾಕಾಂತ, ನೀ ಮಾಡಿದೆ!'

'ಕೊಲೆ ಏನು ಕತ್ತಿಯಿಲ್ಲದೆ ಆಗುತ್ತದೆಯೆ?'

'ಒಂದೇ ಯಾಕೆ ಒಳ್ಳೇ ಎರಡು ಕತ್ತಿಗಳ ಪ್ರಯೋಗ ಮಾಡಿದೆ ಯಲ್ಲ ನೀ ಅವಳ ಮೇಲೆ!'

'ಆದರೆ ಕತ್ತಿಯಿನ್ನು ಉಪಯೋಗಿಸಲಿಕ್ಕೆ ಅಪ್ಪಣೆ ಬೇಕಾಗುವ ದಲ್ಲ!'

'ಬಿಳಿಯರಿಗೆ ಸಮಾಜಕ್ಕೆ ಅದು ಸಹಜವಾಗಿಯೆ ಸಿಗುತ್ತದೆ'

'ಆ ಎರಡು ಶಕ್ತಿ ಯಾವು?'

'ಕಲೆ ಮತ್ತು ಸೌಂದರ್ಯ!'

ಶೂನ್ಯಮನಸ್ಸಿನಿಂದಲೂ ಶೂನ್ಯದೃಷ್ಟಿಯಿಂದಲೂ ರಮಾಕಾಂತನು ರಂಗಭೂಮಿಯ ಕಡೆಗೆ ನೋಡಿದ. ರಾಜನ ರಂಗಮಹಲಿನ ಸನ್ನಿವೇಶದ ಏರ್ಪಾಡು ನಡೆದಿತ್ತು. ಅವನ ಕಣ್ಣಿಗೆ ಸ್ಮಶಾನದಲ್ಲಿ ಚಿತೆಯ ಮೇಲಿಟ್ಟ ವತ್ಸಲೆಯ ಮೂರ್ತಿಯೂ ಸ್ಪಷ್ಟ ಕಾಣಹತ್ತಿತು. ವೈರಾಗ್ಯದ ಅದೊಂದು ಝುಳುಕಿನಲ್ಲಿ ಅವನಿಗೆನಿಸಿತು—ಕಲೆ ಹಾಗೂ ಸೌಂದರ್ಯಗಳು ಮಾನವ ಜೀವನಕ್ಕೆ ಬರೀ ಅಲಂಕಾರಗಳು. ಆ ಜೀವನದ ಆತ್ಮವು ಯಾವದು? ಪ್ರೇಮವೇ ಅದರ ಆತ್ಮ! ಕಲೆ-ಸೌಂದರ್ಯಗಳಿಲ್ಲದೆ ಯಾವದು ಎಳ-ತಳಿರಿನಂತೆ ಅಲುಗುವದಿಲ್ಲವೊ ಅದು ಪ್ರೇಮವಲ್ಲ, ಅದು ಉಪಭೋಗ—ಕೇವಲ ಸುಸಂಸ್ಕೃತ ಉಪಭೋಗವೇ ಸರಿ.

ಅವನ ಓದು ಮುಗಿದದ್ದು ನೋಡಿ ಸುಲೋಚನೆ ಎಂದಳು—'ನಿಮ್ಮ ಕಥೆಗೆ ಅವಳು ಉತ್ತರವೆಂದೇನು ಇದನ್ನು ಬರೆದಂತೆ ಕಾಣುವದಿಲ್ಲ!'

ರಮಾಕಾಂತನು ಏನೂ ಉತ್ತರಕೊಡಲಿಲ್ಲ.

ಯೋಗ್ಯ ವೇಳೆಗೆ ನಾಟಕವು ಆರಂಭವಾಯಿತು. ಪ್ರೇಕ್ಷಕರ ನಡುವೆ ಆ ಉಷೆಯನ್ನೂ ತನ್ನ ಇತರ ವಿದ್ಯಾರ್ಥಿನಿಯರನ್ನು ನೋಡಿ ರಮಾಕಾಂತನ ಮೈಯುಬ್ಬಿತು. ಕಥಾಲೇಖಕನೆಂದು ಅವನು ಇತ್ತೀಚೆ ಒಳ್ಳೇ ಲೋಕಪ್ರಿಯನಾಗಿದ್ದ. ಅದರಲ್ಲಿ ಇದು ಅವನ ಮೊದಲನೇ ನಾಟಕ. ಅದಕ್ಕೆ ಸುರಂಗೆಯ ರೂಪದ ಹಾಗು ಗಾಯನದ ಜೋಡು ಸಿಕ್ಕದ್ದರಿಂದ ನಾಟಕಗೃಹವು ಇಂದು ಇರುವೆಗೂ ಅವಕಾಶವಿಲ್ಲದಂತೆ ತುಂಬಿಹೋಗಿತ್ತು.

ತನ್ನನ್ನು ಕನ್ಯೆಯೆಂದು ನೋಡಲಿಕ್ಕೆ ಬಂದ ಗಂಡಸರ ಮುಂದೆ ಕೂಡುವಾಗ ಹುಡುಗೆಯ ಮನಸ್ಸು ಯಾವ ವ್ಯಾಕುಲ ಸ್ಥಿತಿಯಲ್ಲಿ ಇರುವದೆಂಬ ಅನುಭವವು ರಮಾಕಾಂತನಿಗೆ ಈಗ ಬರತೊಡಗಿತು.

ಯಶದ ಶಿಖರದ ಕಡೆಗೆ ಓಡುವ ಅವನ ಮಹತ್ವಾಕಾಂಕ್ಷೆಯು ಯಾವ ದೊಂದು ವಾಕ್ಯವು ಪ್ರೇಕ್ಷಕರಿಗೆ ರುಚಿಸಲಿಲ್ಲವೆನಿಸಿದ ಕೂಡಲೆ ಎಡವಿ ದಂತೆ ವಿಹ್ವಲವಾಗುತ್ತಿತ್ತು. ಯಾವೊಂದು ವಾಕ್ಯಕ್ಕೆ ಚಪ್ಪಾಳೆಯು ಕಡಕಡಾಟವಾದರೆ ಅದು ವೇಗದಿಂದ ಮುಂದೆ ಓಡುತ್ತಿತ್ತು. ಸುರಂಗೆ ಯಂತೂ ಮೊದಲನೇ ಪದದಿಂದಲೇ ಚಪ್ಪಾಳೆ ದೊರಕಿಸಹತ್ತಿದಳು. ಯಶದ ಈ ಉಬ್ಬಿನಲ್ಲಿ ರಮಾಕಾಂತನು ಹಾಹಾ ಎನ್ನುವದರೊಳಗೆ ವತ್ಸಲೆಯ ಮರಣವನ್ನು ಮರೆತುಬಿಟ್ಟ.

ಮೊದಲನೇ ಅಂಕು ಮುಗಿಯಿತು. ವಿಶ್ರಾಂತಿಗಾಗಿ ಸುರಂಗೆಯು ರಮಾಕಾಂತ ಸುಲೋಚನೆಯರ ಹತ್ತಿರ ಬಂದು ಕುಳಿತಳು. ಅವಳ ಆ ಎದ್ದುಕಾಣುವ ಎತ್ತರ ಮೋರೆಯನ್ನು ನೋಡಿದೊಡನೆ ಸುಲೋಚನೆ ಎಂದಳು— 'ಸುರಂಗಾತಾಯಿ, ನನ್ನದೊಂದು ಕೆಲಸವಿದೆ ನಿಮ್ಮ ಹತ್ತಿರ!'

ಸುರಂಗೆ ಏರೀ ನಕ್ಕಳು.

'ನನಗೊಂದು ಲಕ್ಷ್ಮಿಯ ಚಿತ್ರ ತೆಗೆಯುವದಿದೆ. ನಿಮ್ಮನ್ನು ಲಕ್ಷ್ಮಿಯನ್ನು ಮಾಡಬೇಕೆನ್ನುತ್ತೇನೆ'

ರಮಾಕಾಂತನಿಗೂ ಸುಲೋಚನೆಯು ಇವಳನ್ನಾರಿಸಿದ್ದು ಸರಿ ಬಿತ್ತು. ಅವನಂದ—'ಆಕೆ ಲಕ್ಷ್ಮಿಯೇ ಆಗಿರುವಳು. ಮ್ಯಾನೇಜರರನ್ನು ಕೇಳಿರಿ ಬೇಕಾದರೆ!'

ರೊಕ್ಕದ ಪೆಟ್ಟಿಗೆಯು ಕಂಟಮುಟ ತುಂಬಿದ್ದರಿಂದ ಮ್ಯಾನೇಜರ ಸಾಹೇಬರೂ ಒಳ್ಳೇ ಸಂತೋಷಲ್ಲಿದ್ದರು. ಅವರು ತಮ್ಮ ಹಾಸ್ಯರೂಪ ದಿಂದ ರಮಾಕಾಂತನ ಮಾತನ್ನು ಅನುಮೋದಿಸಿದರು.

ಎರಡನೇ ಅಂಕು ಸುರುವಾಯಿತು. ಅದಕ್ಕೆ ಮೊದಲನೆಯದಕ್ಕಿಂತಲೂ ಹೆಚ್ಚಾಗಿ ರಂಗು ಏರಿತು. ರಮಾಕಾಂತನಿಗೆ ತಾನು ಸ್ವರ್ಗದಲ್ಲಿ ಇರುವೆನೆಂದು ಅನಿಸುತ್ತಿತ್ತು. ನಾಯಕ ನಾಯಿಕೆಯರ ಸಂವಾದ ದಲ್ಲಿಯ ಪ್ರತಿವಾಕ್ಯಕ್ಕೂ ಚಪ್ಪಾಳೆ ಬೀಳಹತ್ತಿದವು.

**ನಾಯಿಕೆ:—ಮಹಾರಾಜರೆ, ನಾನು ಬಡವರ ಕುಲದವಳು. ಕಬ್ಬಿಣದಿಂದ ಆಭರಣಗಳನ್ನು ಮಾಡುವದಿಲ್ಲ—ಬೇಡಿಗಳನ್ನು ಮಾಡುತ್ತಾರೆ.**

**ನಾಯಕ:—ಆದರೆ ಪರುಸಗಲ್ಲಿನ ಸ್ಪರ್ಶವಾದ ಕೂಡಲೆ ಕಬ್ಬಿಣವು ಬಂಗಾರವಾಗುತ್ತದೆ. ಇಂದುಮತೀ, ಈ ಸಂಧ್ಯಾಕಾಲದ ಸೂರ್ಯನಾರಾಯಣನ ಸಮಕ್ಷಮವಾಗಿ ನಿನ್ನ ಕೈಯನ್ನು ನನ್ನ ಕೈಯಲ್ಲಿ ಕೊಡು.**

ಈ ಸಂವಾದವು ಚಪ್ಪಾಳೆಯ ಕಡಕಡಾಟದಲ್ಲಿ ಮುಗಿಯಿತು. ನಾಯಕನು ನಾಯಿಕೆಯ ಕೈಯನ್ನು ತನ್ನ ಕೈಯಲ್ಲಿ ತಕ್ಕೊಂಡ. ಆವಳು ನಾಚಿ ಮೋರೆ ಕೆಳಗೆ ಮಾಡಿದಳು. ಇಷ್ಟರಲ್ಲೆ ಕೆಳಗಿನ ಅಂತಸ್ತಿನ ಹಿಂದಿನ ಭಾಗದಲ್ಲಿ ಏನೋ ಗದ್ದಲವು ಸುರುವಾಯಿತು. ಎಲ್ಲ ಪ್ರೇಕ್ಷಕರೂ ಹಿಂದೆ ನೋಡಹತ್ತಿದರು. ಏನಾಯಿತೆಂಬುದು ರಮಾಕಾಂತನಿಗೆ ತಿಳಿಯದಾಯಿತು. ಎದೆ ಧಡಧಡಿಸುತ್ತಿರಲು ಅವನು ಬಾಗಿಲ ಹತ್ತಿರ ಬಂದು ನಿಂತ.

ಸ್ವಲ್ಪಹೊತ್ತಿನಲ್ಲಿಯೇ ಗದ್ದಲವು ಶಾಂತವಾಯಿತು. ಯಾವನೋ ಕುಡುಕನು ಗೊಂದಲಹಾಕಹತ್ತಿದ್ದರಿಂದ ಪೋಲೀಸರು ಅವನನ್ನು ಹೊರಗೆ ಹಾಕಿದರೆಂದು ತಿಳಿಯಿತು. ರಮಾಕಾಂತನು ಮತ್ತೆ ಶಾಂತ-ಚಿತ್ತದಿಂದ ತನ್ನ ಸ್ಥಳದಲ್ಲಿ ಬಂದು ಕುಳಿತುಕೊಂಡನು. ನಾಟಕದ ಮೂರನೇ ಅಂಕೂ ಯಶಸ್ವಿಯಾಗಿ ಮುಗಿಯಿತು. ರಮಾಕಾಂತನಿಗೆ ತುಂಬಾ ಸಮಾಧಾನವಾಯಿತು.

ನಾಟಕ ಮುಗಿಯುತ್ತಲೇ ರಮಾಕಾಂತನು ಸುಲೋಚನೆಯನ್ನು ಮೋಟರಿನಿಂದ ಅವಳ ಮನೆಗೆ ಕಳಿಸಿಕೊಟ್ಟ. ಹೆಚ್ಚು ತಡವಾದರೆ ಅವಳ ಆಬಚಿಯು ಗೊಂದಲ ಮಾಡುವಳೆಂದು ಆವನಿಗೆ ನಂಬಿಕೆಯಿತ್ತು. ಬಣ್ಣ ಒರಸಿಕೊಂಡು ಸುರಂಗೆಯು ಬಿಡಾರಕ್ಕೆ ಹೋಗಲು ತಯಾರಾಗಬೇಕಾದರೆ ಎಷ್ಟೋ ಹೊತ್ತು ಹಿಡಿಯಿತು. ಮ್ಯಾನೇಜರರು ಬರಬೇಕಾದರೆ ಇನ್ನೂ ತಡವಾಗುವದೆಂದು ಆವರಿಬ್ಬರೇ ಮೋಟರಿನಲ್ಲಿ ಹೊರಟರು.

ಇಂದಿನ ಯಶಸ್ಸಿನ ಆನಂದ, ವಿದ್ಯುದ್ದೀಪಗಳ **ಚಕಚಕಾಟ**, ದೂರದಿಂದ ಬರುವ ವಾದ್ಯಗಳ ಮಧುರಧ್ವನಿ, ಸುರಂಗೆಯು ಕೂದಲಿಗೆ ಹಚ್ಚಿದ ಗಂಧ ದೆಣ್ಣೆಯ ಮನೋಹರ ವಾಸನೆ, ಇವೆಲ್ಲವುಗಳಿಂದ ಉತ್ತೇಜಿತನಾಗಿ ರಮಾಕಾಂತನು ಮೋಟರಿನಲ್ಲಿ ಕೂಡುಕೂಡುತ್ತಲೇ ಕೇಳಿದ—'

'ಸುರಂಗಾ, ಏನು ಕೊಡಲಿ ನಿನಗೆ ಇನಾಮು?'

ಅವಳು ತಟ್ಟನೆ ನುಡಿದು ಬಿಟ್ಟಳು—

'ಪರುಸಗಲ್ಲಿನ ಸ್ಪರ್ಶವಾದ ಕೂಡಲೆ ಕಬ್ಬಿಣವು ಬಂಗಾರ ವಾಗುತ್ತದೆ!'

ಆ ಉನ್ಮಾದಕ ಮನಃಸ್ಥಿತಿಯಲ್ಲಿ ರಮಾಕಾಂತನು ಮೆಲ್ಲನೆ ಅವಳ ಕೈಯನ್ನು ತನ್ನ ಕೈಯಲ್ಲಿ ತಕ್ಕೊಂಡ. ಡ್ರಾಯವ್ಹರನಿಗೆ ಏನೂ ಕಾಣಿ ಸುವದು ಶಕ್ಯವಿದ್ದಿಲ್ಲ. ರಮಾಕಾಂತನು ಪ್ರೇಮಭರದಿಂದ ಅವಳ ಕೈಯನ್ನು ಒತ್ತುವಷ್ಟರಲ್ಲಿ ಮೋಟರಿನ ಹಿಂದಿನಿಂದ ಗೊಗ್ಗರದನಿಯಲ್ಲಿ 'ತುಳಸೀ! ತುಳಸೀ!' ಎಂದು ಯಾರೋ ಒದರಿದ್ದು ಕೇಳ ಬಂತು.

ಸುರಂಗೆಯು ಗಕ್ಕನೆ ಹಿಂತಿರುಗಿ ನೋಡಿದಳು. ಚೇಳು ಕಡಿದರೆ ಮನುಷ್ಯ ಕಾಲು ಜಾಡಿಸುವಂತೆ ಅವಳು ತನ್ನ ಕೈಯನ್ನು ರಮಾ ಕಾಂತನ ಕೈಯೊಳಗಿಂದ ಕಸಿದುಕೊಂಡಳು.

---

೭

## ಪುನರ್ಜನ್ಮ

ದೇವಾಲಯವನ್ನು ಸುತ್ತಿಕೊಂಡು ಬಂದು ಆ ಭವ್ಯ ಸುಂದರ ಸರೋವರವನ್ನು ಕಂಡೊಡನೆ ವತ್ಸಲೆಯ ಶ್ರಮ ಪರಿಹಾರವಾಯಿತು. ಅದರ ನೀಲೀ ನೀರ ಮೇಲೆ ಮೆಲ್ಲಮೆಲ್ಲನೆ ಮುಚ್ಚಿಕೊಳ್ಳುತ್ತಿದ್ದ ಕಮಲ ಗಳು ದೂರದಿಂದ ಚಿಕ್ಕೆಗಳಂತೆ ಕಾಣುತ್ತಿದ್ದವು. ನಡುನಡುವೆ ನೀರಲ್ಲಿ ಒಂದು ಚಿಕ್ಕ ತೆರೆ ಎದ್ದು ಒಂದು ಕಮಲದ ಬುಡದಲ್ಲಿ ಕುಣಿಯುತ್ತಿತ್ತು. ಅದು ಆ ಮೊಗ್ಗೆಗೆ ಸಲಿಗೆಯಿಂದ ಅನ್ನುತ್ತಿತ್ತೇನೊ! 'ಕಮಲಾತಾಯೀ

ಇಷ್ಟು ಸಿಟ್ಟಿಗೇಳಲಿಕ್ಕೆ ಏನಾಯಿತು? ಇಗೋ ನನ್ನ ಮುತ್ತು!! ಎಂದು. ಸರೋವರದ ಮೂರು ಕಡೆಗೆ ಮೂರು ದಿನ್ನೆಗಳಿದ್ದವು. ಅವುಗಳ ನಡುವೆ ಹಸಿರು ಕುಂದಣದಲ್ಲಿ ಕೂಡಿಸಿದ ನೀಲರತ್ನದಂತೆ ಆ ಸರೋವರವು ಹೊಳೆಯುತ್ತಿತ್ತು. ನಡುವೇ ಗಾಳಿಯು ಮಂದವಾದ ಝುಳುಕು ಗೇರು ಹೂವಿನ ಸುಗಂಧವನ್ನು ತರುತ್ತಿತ್ತು. ಅದರ ಮಂದಮಧುರವಾದ ವಾಸನೆಯು ವತ್ಸಲೆಗೆ ಅತ್ತರಕ್ಕಿಂತಲೂ ಆನಂದದಾಯಕವೆನಿಸಿತು. ಅವಳ ಮನದಲ್ಲಿ ಬಂತು—ನಿಸರ್ಗವು ಮನುಷ್ಯನಿಗಿಂತ ಶ್ರೇಷ್ಠವೆಂಬದು ನಿಜ. ಮುಂಜಾವಿನ ಹೂಬಿಸಿಲನ್ನೂ ಮಳೆಗಾಲದ ಮೊದಲನೇ ಮಳೆಯನ್ನೂ ನೋಡುವಾಗ ಮನಸು ಹೇಗೆ ಆನಂದದಿಂದ ಕುಣಿಯುತ್ತದೆ. ಹೂಗಳಂತೆ ತಾರೆಗಳನ್ನು ಅರಳಿಸುವ ಸಂಧ್ಯಾಕಾಲವೂ ಅವನ್ನು ಕೊಯ್ದುಕೊಂಡು ಹೋಗುವ ಉಷಃಕಾಲವೂ ಅಷ್ಟೇ ಮನೋಹರವಾಗಿಲ್ಲವೆ? ಮೊನ್ನೆಯೆ ನಾನು ಮಾಲವಣದಲ್ಲಿ ಸಮುದ್ರವು ಏರುವದನ್ನೂ ನೋಡಿದೆ, ಇಳಿಯುವದನ್ನೂ ನೋಡಿದೆ. ಎರಡೂ ವೇಳೆಗಳಲ್ಲಿ ಆ ತೆರೆಗಳು ಬೆನ್ನು ಮುಟ್ಟುವ ಆಟವು ಅಷ್ಟೇ ಮೋಹಕವೆನಿಸುತ್ತದೆ. ಸಾಧುಸಂತರು ಅಡವಿಗಳಲ್ಲಿ ಸೃಷ್ಟಿಯ ಸಹವಾಸದಲ್ಲಿರುವದರ ಕಾರಣವು ಇದೇ ಇರಬಹುದೇ? ನಿಸರ್ಗವು ಕೇವಲ ಆನಂದಮಯವಾಗಿದೆ. ಮನುಷ್ಯನು ದುಃಖದ ಉಪ್ಪುನೀರಿನಿಂದ ತುಂಬಿದ ಸಮುದ್ರವಾಗಿದ್ದಾನೆ. ಅದರಲ್ಲಿ ಎಂದಾದರೊಮ್ಮೆ ಸುಖದ ಮುತ್ತುಗಳು ಹುಟ್ಟುತ್ತವಷ್ಟೇ!

ಕೈಯೊಳಗಿನ ಸಣ್ಣ ಗಂಟನ್ನು ದಂಡೆಯ ಮೇಲಿಟ್ಟು ಅವಳು ಕೆಂಪು ಮಣ್ಣಿನಿಂದ ಹೊಲಸಾದ ತನ್ನ ಕಾಲು ತೊಳೆದುಕೊಳ್ಳಲಿಕ್ಕೆ ಹತ್ತಿದಳು. ನೋಡುನೋಡುತ್ತ ಅವಳಿಗೆ ಚಿಕ್ಕಂದಿನಲ್ಲಿ ಕಾಲಿಗೆ ಹಚ್ಚಿಕೊಂಡ ಮದರಂಗಿಯು ನೆನಪಾಯಿತು. ನಡೆದು ನಡೆದು ಕಾಲು ಬಹಳ ನೋಯಿಸುತ್ತಿದ್ದವು. ಬರಿಗಾಲಿನಿಂದ ನಡೆದದ್ದರಿಂದ ಅವು ಜರಡಿಯಂತಾಗಿದ್ದವು. ಕಾಲು ತೊಳೆದುಕೊಂಡು ಒದ್ದೆ ಕೈಯಿಂದ ಅವಳು ಮೋರೆಯನ್ನೊರಸಿಕೊಂಡಳು. ಜಪ್ಪಿಸಿ ನೀರಿನಲ್ಲಿ ಬಾಗಿ ನೋಡಿದಳು. ಆ ತಿಳಿನೀರಿನಲ್ಲಿ ಅವಳ ಪ್ರತಿಬಿಂಬವು ಸ್ಪಷ್ಟವಾಗಿ ಕಾಣಿಸಿತು. 'ಬಡವರಿಗೆ ದೊಡ್ಡ

ಕನ್ನಡಿಗಳೆಲ್ಲಿ ಸಿಗಬೇಕು? ಅಂತೇ ಸೃಷ್ಟಿಯು ಇಂಥ ಕೊಳಗಳನ್ನು ನಿರ್ಮಿಸುತ್ತಿರಬಹುದು ಎಂಬ ಕಲ್ಪನೆಯು ಅವಳ ತಲೆಯಲ್ಲಿ ಸುಳಿದು ಹೋಯಿತು. ಮತ್ತೆ ಮೆರೆಯ ಮೇಲೆ ಕೈಯಾಡಿಸುತ್ತಿರಲು ಅದು ಕುಂಕುಮದ ತಿಲಕದ ಹತ್ತಿರ ಹೋಯಿತು. ಆ ಅಸ್ಪಷ್ಟ ಪ್ರತಿಬಿಂಬ ದಲ್ಲಿಯೂ ಆ ತಿಲಕವು ಎದ್ದು ಕಾಣುತ್ತಿತ್ತು. ನೀರಿನ ಒಂದೇ ಹನಿ ಸಾಕು! ಆ ತಿಲಕವು ಎತ್ತಲೋ ಹೋಗಿಬಿಡುತ್ತಿತ್ತು. ಅವಳು ಆ ವಿಶಾಲವಾದ ಕೊಳವನ್ನು ನೋಡಿದಳು. ಎಲ್ಲ ನಿರ್ಭಾಗ್ಯರಾದ ಮುತ್ತೈ ದೆಯರ ಹಣೆಯ ಕುಂಕುಮವನ್ನು ಇಷ್ಟು ನೀರು ತೊಳೆದುಬಿಟ್ಟೀತೆಂಬ ಭಯಂಕರ ವಿಚಾರವು ಅವಳಿಗೆ ಬಂದು ಹೋಯಿತು. ಅವಳು ಕೈಯನ್ನು ಮೆಲ್ಲನೆ ಮೇಲಕ್ಕೆತ್ತಿದಳು. ಅದು ಥರಥರ ನಡುಗುತ್ತಿತ್ತು. ಕುಂಕುಮ ತಿಲಕವನ್ನು ಒರಸಲಿಕ್ಕೆಂದು ಅವಳು ಹಣೆಯ ಕಡೆಗೆ ಕೈ ಒಯ್ಯುವಷ್ಟ ರಲ್ಲಿ ಅವಳಿಗೆ 'ಅಜ್ಜೀ, ಅಲ್ಲಿ ನೋಡು ಅವ್ವ' ಎಂಬ ಶಬ್ದಗಳು ಕೇಳ ಬಂದವು.

'ಅವ್ವ, ಎಂಬ ಶಬ್ದವನ್ನು ಕೇಳುತ್ತಲೆ ಅವಳ ಕೈ ಒಮ್ಮೆಲೆ ಕೆಳಗೆ ಹೋಯಿತು. ತಿಳಿದೂ ತಿಳಿದೂ ತಾನು ವಿಧವೆಯಾಗುತ್ತಿದ್ದಳಲ್ಲ. ವಿಧ ವೆಯು ತಾಯಿಯಾಗುವದೆಂತು? ಸಧವೆಗೆ ತಾಯಿಯಾಗುವದು ಶಕ್ಯ ವಿದೆ. ಇಂದಿಲ್ಲ ನಾಳೆಯಾದರೂ ರಮಾಕಾಂತನಿಗೆ ಪಶ್ಚಾತ್ತಾಪವಾಗಿ ಅವನು ತನ್ನನ್ನು ಆದರದಿಂದ ತಿರುಗಿ ಕರೆದುಕೊಂಡು ಹೋಗಬಹುದು. ಈ ವಿಚಾರದಿಂದ ಅವಳದವಳಿಗೇ ನಗೆ ಬಂದಿತು. ರಮಾಕಾಂತ ತನ್ನನ್ನು ಎಲ್ಲಿಂದ ತಿರುಗಿ ಕರೆದೊಯ್ಯಬೇಕು? ಸ್ವರ್ಗದಿಂದ! ಅವನ ದೃಷ್ಟಿಯಿಂದ ತಾನು ಈಗ ಸ್ವರ್ಗದಲ್ಲಿಯೇ ಇದ್ದದ್ದು; ತನ್ನ ಆ ಸ್ವರ್ಗ ಯಾವುದು? ಕಾಮಾಪುರದ ಗೇರುಕಾರಖಾನೆ! ಕೂಲಿಕಾರರ ಹೆಂಡತಿಗೆ ಒಪ್ಪುವ ಹಾಗೇ ತನ್ನ ರೂಪವಿದೆಯೆಂದು ರಮಾಕಾಂತನಿಗೆನಿಸುತ್ತದೆ. ತನ್ನ ಪತಿ ಸುರೂಪಿ, ಕಲಾವಂತ, ಶ್ರೀಮಂತ, ಉಚ್ಚ ಕುಲದ ಮನುಷ್ಯ. ತಾನು ಕುರೂಪಿ, ಕಲಾಹೀನೆ, ದರಿದ್ರಳಾದ ಕೂಲಿಕಾರಳಾಗುವಳು. ಈ ಎರಡು ಕೊನೆಗಳು ಎಂದಾದರೂ ಕೂಡಬಹುದೆ? 'ಅವ್ವ' ಎಂಬ ಶಬ್ದ ಕೇಳಿದ

ಕೂಡಲೆ ತನಗೇನೆನಿಸಿತೋ ಅದೆಲ್ಲವೂ ಬರೀ ತೋರಿಕೆಯಾಗಿಯೆ ಉಳಿಯು ವದು. ಹಿಂತಿರುಗಿ ಕ್ಷಿತಿಜದ ಕಡೆಗೆ ನೋಡಿದಳು. ಕೆಂಪಾದ ಸೂರ್ಯ ಬಿಂಬವು ಕ್ಷಿತಿಜದ ಮೇಲೆ ಕಾಣುತ್ತಿತ್ತು. ಆಕಾಶವು ಬಾಗಿ ಪೃಥ್ವಿಯ ಮೇಲೆ ಪಶ್ಚಾತ್ತಾಪದಿಂದ ಕಾಯ್ದು ತನ್ನ ಮಸ್ತಕವನ್ನಿಡುವಂತೆ ಅವಳಿಗೆ ತೋರಿತು. ಆ ದಿವ್ಯಸ್ಪರ್ಶದಿಂದ ಭೂವ್ಯಾಕಾಶಗಳೆರಡೂ ಕೆಂಪಾಗಿ ಹೋಗಿದ್ದವು. ರಮಾಕಾಂತನಿಂದ ಎಂದಾದರೂ ಈ ಸುಖವು ತನಗೆ ಸಿಗಬಹುದೆ?

ತನ್ನ ದುರ್ಬಲ ಮನಸ್ಸು ನೋಡಿ ಅವಳದವಳಿಗೇ ಸಿಟ್ಟುಬಂತು. ಮೊದಲನೇ ಭೆಟ್ಟಿಯ ದಿವಸವೇ ತನ್ನ ನಿರಾಕರಿಸಿಬಿಡುವವನು, ಆ ಮೇಲೆ ಅಸ್ವಸ್ಥನಾದ ತಂದೆಯ ಶುಶ್ರೂಷೆಯ ನೆವದಿಂದ ತನ್ನನ್ನು ದೂರವಿಡು ವವನು, ಕಡೆಗೆ ತನ್ನ ಕಣ್ಣೆದುರಿನಲ್ಲಿಯೆ ಮತ್ತೊಬ್ಬ ಹೆಂಗಸಿನೊಡನೆ ಬೆಳದಿಂಗಳಲ್ಲಿ ತಿರುಗಾಡಲಿಕ್ಕೆ ಹೋಗುವವನು—ಇಂಥ ಗಂಡನ ಕಡೆಗೆ ತನ್ನ ಮನವು ಮೇಲಿಂದ ಮೇಲೆ ಆಶಾಪೂರ್ಣದೃಷ್ಟಿಯಿಂದೇಕೆ ನೋಡ ಬೇಕು? ಈ ವಿಚಾರದ ಭರದಲ್ಲಿರುವಾಗಲೇ ಅವಳು ಕೈಯಿಂದ ಸಹಜ ವಾಗಿ ಒಂದು ಕಲ್ಲು ತಕ್ಕೊಂಡು ಕೊಳದಲ್ಲಿ ಒಗೆದಳು. ಸ್ವಲ್ಪ ದೊಡ್ಡ ತೆರೆಗಳೆದ್ದವು. ಸಮೀಪದ ಕಮಲಗಳು ಕ್ಷಣಹೊತ್ತು ಅಲುಗಾಡಿದವು. ಆ ಸಪ್ಪಳದಿಂದ ದಂಡೆಯ ಮೇಲಿನ ಒಂದು ಪಕ್ಷಿಯು ಕಿರ್ ಶಬ್ದವನ್ನು ಮಾಡುತ್ತ ಹಾರಿ ಹೋಯಿತು.

ವತ್ಸಲೆಯು ವಿಚಾರ ಮಾಡಹತ್ತಿದಳು—ಈ ಕಲ್ಲಿನ ಬದಲು ನಾನೇ ಬಿದ್ದಿದ್ದರೆ? ನಿಸರ್ಗಕ್ಕೇನು ಕಲ್ಲೂ ಅಷ್ಟೇ, ನಾನೂ ಅಷ್ಟೇ! ನಾನೇ ಬಿದ್ದಿದ್ದರೆ—ಬೀಳುವ ಸಪ್ಪಳವು ಸ್ವಲ್ಪ ಹೆಚ್ಚಾಗುತ್ತಿತ್ತು, ತೆರೆಗಳು ಬಹಳ ವೇಗದಿಂದ ಏಳುತ್ತಿದ್ದವು, ಕಮಲಗಳು ಹೆಚ್ಚು ವೇಳೆ ಅಲುಗಾಡುತ್ತಿ ದ್ದವು, ಒಂದು ವೇಳೆ ಪಕ್ಷಿಗಳೂ ಕಲಕಲಾಟ ಮಾಡುತ್ತಿದ್ದವು. ಆನಂದ ಮಯವಾದ ನಿಸರ್ಗವು ತನ್ನ ಮರಣಕ್ಕಾಗಿ ಬಹಳವಾದರೆ ಇಷ್ಟೇ ದುಃಖವನ್ನು ವ್ಯಕ್ತಮಾಡುತ್ತಿತ್ತು. ಆದರೆ ಅದೇ ವೇಳೆಯಲ್ಲಿ ದಂಡೆಯ ಮೇಲೊಬ್ಬ ಮನುಷ್ಯನಿದ್ದರೆ? ನಿಸರ್ಗದಂತೆ ಶಾಂತರೀತಿಯಿಂದ ಅವನು

ತನ್ನ ಮರಣವನ್ನು ನೋಡುತ್ತಿದ್ದನೇ? ಅವನಿಗೆ ಈಸುಬರುತ್ತಿದ್ದರೆ ಜಿಗಿದುಬಿಡುತ್ತಿದ್ದ, ಬರುತ್ತಿದ್ದಿಲ್ಲವಾದರೆ ಒದರಾಟ–ಚೀರಾಟ ಮಾಡುತ್ತಿದ್ದ. ಮನುಷ್ಯನೇ ನಿಸರ್ಗಕ್ಕಿಂತ ಶ್ರೇಷ್ಠನು. ನಿಸರ್ಗವು ನಿರ್ಜೀವ. ಮನುಷ್ಯನು ಸಜೀವ! ಜೀವನವು ಜೀವನದೊಡನೆಯೇ ಸಮರಸವಾಗುವದು.

'ಅದು ನೋಡು, ಅದು ನೋಡು' ಮತ್ತೆ ಆಗಳೆ ಕೇಳಿದ ದನಿಯೇ ಕೇಳ ಬಂತು. ವತ್ಸಲೆಯು ತಿರುಗಿ ನೋಡಿದಳು. ಬಲಗಡೆಯ ದಿನ್ನೆಯ ಮೇಲಿನ ಗೇರುವಿನ ಗಿಡಗಳ ತೋಪಿನೊಳಗಿಂದ ಒಬ್ಬ ಮುದುಕಿಯೂ ಐದಾರು ವರ್ಷದ ಒಬ್ಬ ಹುಡುಗನೂ ಕೆಳಗೆ ಇಳಿಯುತ್ತಿದ್ದರು. ಹುಡುಗನು ಕಲ್ಲಿನಿಂದ ಕಲ್ಲಿಗೆ ಜಿಗಿಯುತ್ತಿದ್ದನು. ಮುದುಕಿಯು ತನ್ನ ತ್ರಾಣ ನೋಡಿಕೊಂಡು ಇಳಿಯುತ್ತಿದ್ದಳು, ಹುಡುಗನ ದನಿ ಕೇಳಿಸಿತು–
'ಅಜ್ಜೀ, ನೀನೂ ಜಿಗಿಯಲ್ಲಾ ನೋಡೂನು.'

'ಹೌದಲೆ ಕಳ್ಳ, ಮುದಕಿಗೆ ಚಾಷ್ಟೀ ಮಾಡತೀ ಏನು?'

ವತ್ಸಲೆಯ ಮನದಲ್ಲಿ ಮಾತ್ರ ಈ ಸಂವಾದದಿಂದ ಬೇರೆ ವಿಚಾರವೇ ಹುಟ್ಟಿತು. ಚಿಕ್ಕಂದಿನಲ್ಲಿ ಕೂಸು ತಾಯಿತಂದೆಗಳ ಜೀವದ ಮೇಲೆ ಜಿಗಿದಾಡುತ್ತದೆ. ಆದರೆ ದೊಡ್ಡವನಾದ ಮೇಲೆ ಯಾರ ಜೀವದ ಮೇಲೆ ಜಿಗಿದಾಡಬೇಕು? ತನ್ನ ಸ್ವಂತದ ಮೇಲೆಯೆ? ಈಗ ಸ್ಪಷ್ಟ ಕಾಣುತ್ತಿದ್ದ ಅವರಿಬ್ಬರ ಜೋಡಿಯನ್ನು ಮತ್ತೆ ನೋಡಿದಳು. ಮುದುಕಿಯ ಆಯುಷ್ಯದಲ್ಲಿ ಸಾಯಂಕಾಲವಾಗಿದ್ದರೂ ಅದು ವಸಂತಋತುವಿನ ಸಂಜೆಯಾಗಿತ್ತು. ಅವಳು ಅರವತ್ತು ವರ್ಷಗಳನ್ನು ಸಹಜ ಮಿಾರಿರಬಹುದು! ಆದರೂ ಅವಳ ಮೈಕಟ್ಟು ಎಷ್ಟು ದೃಢವಾಗಿತ್ತು! ಮೋರೆಯ ಮೇಲೆ ಮುಪ್ಪಿನ ಕಳೆ ಇರಲಿಲ್ಲವೆಂದಲ್ಲ, ಆದರೆ ಅದರೊಡನೆಯೆ ತಾರುಣ್ಯದ ಉತ್ಸಾಹವೂ ಎದ್ದುಕಾಣುತ್ತಿತ್ತು. ಒಟ್ಟು ಅವಳ ವೇಷವನ್ನು ನೋಡಿದರೆ ಅವಳು ಕೂಲಿಯುವರ ವರ್ಗದವಳಂತೆಯೇ ಕಾಣುತ್ತಿದ್ದಳು; ಆದರೆ ಆ ಮಾನದಿಂದ ಅವಳ ಸೀರೆ ಗಟ್ಟಿಯಾಗಿಯೂ ಸ್ವಚ್ಛವಾಗಿಯೂ ಇತ್ತು. ಆದರೆ ವತ್ಸಲೆಗೆ ಹೆಚ್ಚು ಆಶ್ಚರ್ಯವಾದದ್ದು ಅವಳಿಗಿಂತಲೂ ಅವಳ

ವೊಮ್ಮಗನನ್ನು ನೋಡಿ. ಅವನದು ಒಳ್ಳೇ ಗೌರವರ್ಣ! ಗರುಡನಂಥ ಅವನ ಮೂಗೂ, ಎದ್ದು ಕಾಣುವ ಕಳೆಯೂ, ಅಂದವಾದ ಮೋರೆಯೂ, ಅಗಲವಾಗಿರದಿದ್ದರೂ ಚೆಲುವಾದ ಹಣೆಯೂ ಬಹಳೇ ಆಕರ್ಷಕವಾಗಿದ್ದವು. ಈ ಹುಡುಗನು ಆ ಮುದುಕಿಯ ಮೊಮ್ಮಗನೆಂದರೆ ಯಾರೂ ನಂಬುವಂತಿದ್ದಿಲ್ಲ!

ಆ ಹುಡುಗನು ದಿನ್ನೆಯನ್ನಿಳಿದು ಕೆಳಗೆ ಬಂದು ಒಮ್ಮೆಲೇ ತಡೆದ. ಅವನು ವತ್ಸಲೆಯನ್ನು ದಿಟ್ಟಿಸಿ ನೋಡಿ ನಿರಾಶೆಯಿಂದೆಂದ—'ಅವ್ವ ಅಲ್ಲೇನಽ ಅಜ್ಜೀ ಇಕೀ?'

ಮುದುಕಿಯೂ ಕೆಳಗೆ ಬಂದು ವತ್ಸಲೆಯನ್ನು ದಿಟ್ಟಿಸಿ ನೋಡ ಹತ್ತಿದಳು. ಕಾವೂಪುರದಲ್ಲಿಯ ಪ್ರತಿಯೊಂದು ಕಲ್ಲು ಹರಳು ಕೂಡ ಅವಳಿಗೆ ಗೊತ್ತು. ವತ್ಸಲೆಯ ಗಂಟಿನ ಕಡೆಗೆ ನೋಡಿ ಅವಳು ಕೇಳಿದಳು: 'ಎಲ್ಲೀಡ ಬಂದೆವ್ವ ನೀನು?'

ತನ್ನ ಸ್ವಂತದ ಕಥೆಯನ್ನು ಇವಳಿಗೆ ತಿಳಿಸಿ ಹೇಳುವದು ಅಶಕ್ಯವೆಂದು ವತ್ಸಲೆಗೆನಿಸಿತು. ಅವಳು ಉತ್ತರಕೊಟ್ಟಳು—'ದೇವರ ಮನೆಯಿಂದ!' ನಡುವೇ ಆ ಹುಡುಗನಂದ–'ಅಜ್ಜೀ, ನಮ್ಮ ಬಾಬಾ ಅಲ್ಲೇ ಇದ್ದಾರಲ್ಲ?'

ಅವನ ಕಡೆಗೆ ಲಕ್ಷ್ಯಕೊಡದೆ ಮುದುಕಿಯು ಪ್ರೇಮಲಸ್ವರದಿಂದ ಕೇಳಿದಳು—'ಮುಂದೆ ಎಲ್ಲಿ ಹೋಗುವಾಕಿ ಇದ್ದೀ?'

ವತ್ಸಲೆಯು ಶೂನ್ಯದೃಷ್ಟಿಯಿಂದ ಮೇಲೆ ನೋಡಿದಳು. ಸಂಜೆ ಆಗಿದ್ದರಿಂದ ಕಾಗೆಗಳು ಹಿಂಡುಹಿಂಡಾಗಿ ಭರ್ರನೇ ಹಾರುತ್ತ ಗೂಡುಗಳ ಕಡೆಗೆ ಹೋಗುತ್ತಿದ್ದವು. ಅವಳ ಮನದೊಳಗೆ ಬಂದಿತು—ಈ ಹಕ್ಕಿಗಳಿಗೆ ಕೂಡ ಎಲ್ಲಿ ಹೋಗಬೇಕೆಂಬುದು ಗೊತ್ತಿದೆ. ಆದರೆ ತನಗೆ? ಅವಳ ಕಣ್ಣಲ್ಲಿ ನೀರು ತುಂಬಿತು.

ಮುದುಕಿಯು ವತ್ಸಲೆಯ ಹತ್ತಿರ ಹೋಗಿ ವಾತ್ಸಲ್ಯದಿಂದ ಅವಳ ಬೆನ್ನಮೇಲೆ ಕೈಯಿಡುತ್ತ 'ತಂಗೀ' ಎಂದಳು. ಬಿಸಿಲಿನ ಕಾವಿಗೆ ಭರ್ಫವು ಕರಗುವಂತೆ ವತ್ಸಲೆಯ ಮನಸ್ಸು ಆ ಮುದುಕಿಯ ಮಾಯೆಯಿಂದ

ಕರಗಿತು. ಅವಳು ಕೃತಜ್ಞದೃಷ್ಟಿಯಿಂದ ಅವಳ ಕಡೆಗೆ ನೋಡಿದಳು. ವತ್ಸಲೆಯು ಹತ್ತಿರ ಕೂಡುತ್ತ ಮುದುಕಿಯೆಂದಳು— 'ಸೋನ್ಯಾ, ಬಕುಳೀ ಹೂ ತಗೊಂಡು ಬಾ ಹೋಗು. ಮೂರೂಸಂಜೆ ಆಗೇದ. ಕಾಲಾಗ ನೋಡಿಕೊಂಡು ಹೋಗು ಹಂs' ಸೋನ್ಯಾ ಜಿಗಿದಾಡುತ್ತಲೆ ದೇವಾಲಯದ ಹತ್ತಿರವಿದ್ದ ಬಕುಲ ಗಿಡದ ಕಡೆಗೆ ಹೋದ.

'ತಂಗೀ, ನಿನ್ನ ಹೆಸರೇನು?'

'ಕೃಷ್ಣಾ'

'ಯಾತರಾಕಿ?'

'ನಿಮ್ಮದು ಯಾವದು ಅದೇ ನಂದೂ'

ಮುದುಕಿ ಆಶ್ಚರ್ಯದಿಂದ ತಿರುಗಿ ನೋಡಿದಳು. ಬಣ್ಣ ಕಪ್ಪಿನ ಮೇಲೆ. ರೂಪವೂ ಸಾಮಾನ್ಯ. ಮುದುಕಿ ವಿಚಾರದಲ್ಲಿ ಬಿದ್ದಳೆಂಬದನ್ನು ನೋಡಿ ವತ್ಸಲೆಯೆಂದಳು–'ಎಲ್ಲಾ ಮನುಷ್ಯರ ಜಾತಿ ಒಂದೇ ಅಲ್ಲೇನು ಅಜ್ಜೀ?'

'ದೇವರೆಲ್ಲಾ ಒಂದs ಜಾತಿ ಮಾಡ್ಯಾನವ್ವಾ. ಆದರ ಮನಸ್ಯಾರು?'

'ಮನಸ್ಯಾರೆಲ್ಲಾ ಕೆಡಿಸಿ ಹಾಳಮಾಡ್ಯಾರ ಹೌದಲ್ಲೋ'

'ಹೌದ ಹೌದು! ಆ ಟೆಂಗಿನ ಗಿಡಾ ನೋಡು'

ಎದುರಿಗಿದ್ದ ಗುಡ್ಡದ ಅಡಿಯ ಹತ್ತರವಿದ್ದ ತೆಂಗಿನ ತೋಪಿನ ಕಡೆಗೆ ಬೊಟ್ಟುಮಾಡುತ್ತ ಮುದುಕಿಯೆಂದಳು—'ದೇವರು ಕಲ್ಪರಿಕ್ಷ ಕೊಟ್ಟಾನ. ಮನಸ್ಯಾರೇನ ಮಾಡತಾರ ನೋಡ ಅದರದು'

'ಏನು?'

'ಸೆರೇ! ಸಿಂದಿ! ಮೂರ ವರ್ಷದ ಹಿಂದ ದೇವ ಬಾಪ್ಪಾ ಅವರು ಎಲ್ಲಾ ಬಂದ ಮಾಡಿದ್ದರು—'

'ದೇವ ಬಾಪ್ಪಾ! ದೇವ ಬಾಪ್ಪಾ ಅಂದರ ಯಾರು?'

'ದೇವ ಬಾಪ್ಪಾ ಗೊತ್ತಿಲ್ಲs ನಿನಗೆ? ಐ ತಂಗೀ! ಸಬಂದ ಕೊಂಕಣ ಪಟ್ಟೀಯೊಳಗ—'

ಮಾಲವಣದಲ್ಲಿ ಹೊತ್ತಿಗೆ ಸರಿಯಾಗಿ ನೋಡಿದ ಬಾಪ್ಪಾ ಅವರ

ಮೂರ್ತಿ ವತ್ಸಲೆಗೆ ನೆನಪಾಯಿತು. ಖಾನಾವಳಿಯಲ್ಲಿ ಅವರ ಕತೆಯನ್ನು ಕೇಳಿದಾಗಿನಿಂದ ಗೋಡಂಬಿಯ ಕಾರಖಾನೆಯಲ್ಲಿ ತಾನು ಕೆಲಸ ಮಾಡ ಬೇಕೆಂಬ ಅವಳ ನಿಶ್ಚಯವು ಸಂಪೂರ್ಣ ದೃಢವಾಗಿಬಿಟ್ಟಿತ್ತು. ಆದರೂ ಅವಳು ಕಾಶಿಗೆ ಹೇಳಿದಳು—'ನಾ ಘಟ್ಟದ ಮೇಲಿನವಳು ಅಜ್ಜೀ!'

'ಬೆಳಗಾಂವ ಕೊಲ್ಹಾಪೂರ ಕಡಿಯಾಕೇನು?'

'ಹೌದು'

'ನಾನೂ ಇದ್ದನಿ ತಂಗೀ ಬೆಳಗಾವ್ಯಾಗ. ಬಾಳ ವರ್ಸ ಇದ್ದೆ'

ಮುದುಕಿ ಬೆಳಗಾವಿಯ ಬಗ್ಗೆ ಏನಾದರೂ ಸಮಾಚಾರವನ್ನು ಎಲ್ಲಿ ಕೇಳುವಳೋ ಎಂದು ವತ್ಸಲೆಯು ಹೆದರಿದಳು.

ಮುದುಕಿ ಕೇಳಿದಳು–'ಕೊಂಕಣಕ್ಕೆ ಯಾತಕ್ಕ ಬಂದೀಯವ್ವಾ?'

'ಹೊಟ್ಟೆ ತುಂಬಿಕೊಳ್ಳಿಕ್ಕೆ!'

ಸ್ವಲ್ಪಹೊತ್ತು ಸುಮ್ಮನಿದ್ದು ಮುದುಕಿ ಮತ್ತೆ ಕೇಳಿದಳು—'ನಿನ್ನ ಗಂಡ ಏನ ಮಾಡತಾನ?' ಆಗಲೆ ಮಂಗಳಸೂತ್ರ ಹರಿದು ಕುಂಕುಮ ಒರಸಿಕೊಂಡುಬಿಟ್ಟಿದ್ದರೆ ನೆಟ್ಟಗಾಗುತ್ತಿತ್ತೆಂದು ವತ್ಸಲೆಗೆ ಅನಿಸಿತು. ಅವಳು ಸರೋವರದ ಪ್ರಶಾಂತವಾದ ನೀರ ಕಡೆಗೆ ನೋಡ ಹತ್ತಿದಳು.

'ಅವ ನಿನ್ನ ಚಲೋತನ್ಯಾಗಿ ಇಟಗೋಳೂದಿಲ್ಲ ಕಾಣತೈತಿ. ಹೌದಲ್ಲೊ?'

ವತ್ಸಲೆಯು ಹೂಂ ಎಂಬರ್ಥದಲ್ಲಿ ತಲೆಯಲ್ಲಾಡಿಸಿದಳು.

'ಹೆಂಗಸರ ಗಿಂಗಸರ ನಾದ ಅದ ಏನು?' ಸ್ವಲ್ಪಹೊತ್ತು ಸುಮ್ಮ ನಿದ್ದು ಮುದುಕಿ ಮತ್ತೆ ಅಂದಳು—'ಹರೇದ ಹುಡುಗಿ ನೀ ಇನ್ನ! ಗಂಡ ಇಲ್ಲದ ನಿನ್ನ ಜಲ್ಮ ಹ್ಯಾಂಗ ಹೋದೀತ ತಂಗೀ'

ತನ್ನ ಉದ್ಗಾರದಿಂದ ಕೃಷ್ಣೆಗೆ ಕೆಡಕೆನಿಸುತ್ತದೆಂದು ಮುದುಕಿಯ ಕಲ್ಪನೆಯಾಯಿತು. ಆವಳಂದಳು—'ಗಂಡಸರಂದರ ನಾಯಿ ಇದ್ಹಂಗ. ಒಮ್ಮೆ ಹುಚ್ಚು ಹಿಡಿತಂದರ—ಈ ಸೋನ್ಯಾನ ಅವ್ವ ಏನೇನು—' ಒಮ್ಮೆಲೆ ಮುದುಕಿ ನಾಲಿಗೆ ಕಚ್ಚಿಕೊಂಡಳು. ವತ್ಸಲೆ ಕೇಳಿದಳು—'ಇಲ್ಲೆ ಈ ಊರಾಗ ಗೋಡಂಬಿ ಕಾರಖಾನೆ ಅದ ಅಲ್ಲ?'

'ಅದ ಅಲ್ಲಾ. ಊರಾಗಿನ 'ದವ್ಮ್ಮಖೋರ ಮಂದಿ' ಎಲ್ಲ ಕೆಮ್ಮಿ ಕೋತ ಕೂತಿರತಾರ!'

'ಅಲ್ಲಿ ನನಗ ಕೆಲಸ ಸಿಕ್ಕೀತೇನು?'

'ಕೆಲಸ ಸಿಕ್ಕೀತು; ಆದರ ತಂಗೀ ನೀ ಬಹಾಳ ಸುಮಾರ ವ್ಯಾಳ್ಯಾದಾಗ ಬಂದಿ'

ವತ್ಸಲೆಯು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದಳು.

'ಇನ್ನ ಕಾರಖಾನೆದಾಗಿನ ಕೂಲಿ ಕಡಿಮಿ ಆಗತೈತಿ'

'ಅದ್ಯಾಕ?'

'ಅವ ದಾದಾ ಧಂದೇ ಸಾಗೂದಿಲ್ಲ ಅಂತಾನ'

'ದಾದಾ ಅಂದರ ಯಾರು?'

'ಆ ಕಾರಖಾನದಾರ! ಬಂಗಲೆ ಕಟ್ಟಿಸಲಿಕ್ಕೆ ಸಾಗತೈತಿ, ಅವನ ಮಗಳಿಗೆ ಡೌಲು ಮಾಡಾಕ ಸಾಗತೈತಿ, ಅವಗ ಬಡ್ಡಿ ಸಾಲಾ ಕೊಡಲಿಕ್ಕೆ ಸಾಗತೈತಿ ಕೂಲಿ ಕೊಡಲಿಕ್ಕೆ ಅಽಟ ಧಂದೆ ಸಾಗೂದಿಲ್ಲ ಅವಗ. ಮತ್ತೇನಾರೆ ಕೆಲಸಾನೂ ಮಾಡತೀನಿ ಆದರೊಳಗ ಹೊಟ್ಟಿ ತುಂಬದಿದ್ದರ'

'ಕೆಲಸಾ ಮಾಡಲಿಕ್ಕೇನ ತಾಯಿ, ಬಡವರು ಹುಟ್ಟಿದ್ದು'

ಮುದುಕಿಯು ಸುತ್ತಲೂ ನೋಡಿದಳು. ಕತ್ತಲೆ ಬೀಳಹತ್ತಿತು. 'ಸೋನ್ಯಾ, ಏ ಸೋನ್ಯಾ' ಎಂದು ಕೂಗಿದಳು. ಉತ್ತರ ಬರದೇ ಇದ್ದದ್ದನ್ನು ನೋಡಿ ಅವಳು ಕೂಽ ಎಂದು ಕೂಗಿದಳು. ಕೂಡಲೆ ಮತ್ತೊಂದು ಕೂಗು ಉತ್ತರ ಕೊಟ್ಟಿತು. ಕೂಗಿನ ಹಿಂದೆಯೆ ಸೋನ್ಯಾ ಬಂದ.

'ಇವ ನಿಮ್ಮ ಮೊಮ್ಮಗನ ಏನು?' ಎಂಬ ಪ್ರಶ್ನೆ ಕೇಳಬೇಕೆಂದು ವತ್ಸಲೆಯ ಮನಸ್ಸಿನಲ್ಲಿ ಬಂದಿತ್ತು. ಆದರೆ ಅವಳಿಗೆ ಧೈರ್ಯವಾಗಲಿಲ್ಲ. ಇಷ್ಟರಲ್ಲಿ ಸೋನ್ಯಾ ಬೊಗಸೆ ತುಂಬ ಬಕುಲದ ಹೂವುಗಳನ್ನು ತೆಗೆದುಕೊಂಡು ಬಂದ. ಅವನ್ನು ನೋಡಿ ವತ್ಸಲೆಯೆಂದಳು: 'ಬಕುಲದ್ದೊ ಅಲ್ಲಽ ಈ ಹೂವು?'

'ಅಲ್ಲ 'ಓವಳಿ ಹೂ' ಎಂದ ಸೋನ್ಯಾ.

'ಅಂದರೇನಽ ಬಕುಲದ್ದೊ' ಎಂದಳು ಮುದುಕಿ.

'ಅಲ್ಲ, ಅಲ್ಲ. ಇವು ಓವಳೀ ಹೂ' ಎಂದು ಸೋನ್ಯಾ ಗಟ್ಟಿಯಾಗಿ ತನ್ನ ಮತ ಹೇಳಿಬಿಟ್ಟ.

'ಯಾತರವೇನೋ ಅನ್ನೂಹಾಂಗ ಕಾಣಸ್ತಾವ ಇವು' ಎಂದು ವತ್ಸಲೆಯೆಂದಳು.

'ಹಂಗೇ ಅದನವ್ವಾ ಎಲ್ಲಾ' ಮುದುಕಿ ಅವುಗಳೊಳಗಿನ ಒಂದು ಹೂವು ತಕ್ಕೊಂಡು ಅದರ ಮೇಲಿನ ಹೊಲಸು ಹೊದಿಕೆಯನ್ನು ತೆಗೆದು ಒಗೆದಳು. ಒಳಗೆ ನಾಜೂಕಾದ ಬಕುಲದ ಹೂವು ಇತ್ತು.

ತನ್ನ ಸ್ಥಿತಿಯೂ ಆ ಬಕುಲದ ಹೂವಿನಂತೆಯೆ ಎಂದು ವತ್ಸಲೆಗೆ ಎನಿಸಿತು. ರಮಾಕಾಂತನು ಬಹಿರಂಗದ ಮೇಲಿಂದಲೇ ತನ್ನನ್ನು ತಿರಸ್ಕಾರ ಮಾಡಿದನು. ಆದರೆ ತನ್ನ ಗುಣವು ಗೊತ್ತಾದರೆ ಅದೇ ರಮಾಕಾಂತನು ತನಗೆ ಶರಣುಬರಬಹುದು.

ಈ ವಿಚಾರದೊಡನೆಯೆ ಅವಳ ಮನಸ್ಸು ಉಲ್ಲಾಸದಿಂದ ತುಂಬಿ ಹೋಯಿತು. ತನ್ನ ಸುತ್ತಲಿನ ಸೃಷ್ಟಿಯೂ ಅವಳಿಗೆ ಅಷ್ಟೇ ಆನಂದದಾಯಕವೆನಿಸಿತು. ದಿನದ ತಾಪವು ಹೋಗಿ ಗಾಳಿಯು ತಂಪಾಗಿ ಬೀಸಹತ್ತಿತು. ಕೋಮಲವಾದ ಕೈಬೆರಳುಗಳಿಂದ ಅದು ಕೊಳದೊಳಗೆ ಜಲತರಂಗವನ್ನು ಬಾರಿಸಹತ್ತಿತ್ತು. ಹೊರಗೆ ತಿರುಗುತ್ತ ಹೋದ ಹುಡುಗನನ್ನು ಮನೆಗೆ ಕರೆತಂದು ತಾಯಿಯು ಹೊಚ್ಚಿ ಮಲಗಿಸುವಂತೆ ಸೃಷ್ಟಿಯು ತನ್ನ ನೀಲವಾದ ಚಾದರವನ್ನು ಪೃಥ್ವಿಯ ಮೈಮೇಲೆ ಎಳೆಯುತ್ತಿದೆಯೆಂದು ವತ್ಸಲೆಗೆನಿಸಿತು.

ಅತ್ತಕಡೆ ಕಮಲೇಶ್ವರಿ ಗುಡಿಯಲ್ಲಿಯ ಸಂಜೆಯ ನೌಬತ್ತು ಸುರುವಾಯಿತು. ಶಾಂತವಾದ ವಾತಾವರಣದಲ್ಲಿ ಬರುವ ಅದರ ಪ್ರತಿಧ್ವನಿಯನ್ನು ವತ್ಸಲೆಯು ಉತ್ಸುಕತೆಯಿಂದ ಕೇಳಹತ್ತಿದಳು. ಅವಳಿಗೆ ಮುಂಬಯಿಯ ಗದ್ದಲದ ನೆನಪಾಯಿತು. ಚೌಪಾಟಿಯ ಮೇಲಿನ ಆ ಗದ್ದಲ, ಕೊಳದ ಮೇಲಿನ ಈ ಶಾಂತತೆ. ಅಲ್ಲಿಯ ಮೋಟಾರು-ಟ್ರಾಮು ಗಳ ಖಣಖಣಾಟ, ಇಲ್ಲಿಯ ಬಜಂತ್ರಿಯ ಮಂಜುಳ ಸ್ವರ. ಈ ಎರಡೂ ಜಗತ್ತುಗಳಲ್ಲಿ ಎಷ್ಟು ವಿಲಕ್ಷಣ ಅಂತರವಿದೆ! ರಮಾಕಾಂತನ ಶಬ್ದಗಳು

ಅವಳಿಗೆ ನೆನಪಾದವು. 'ನನ್ನ ನಿನ್ನ ನಡುವೆ ಎರಡು ಧ್ರುವಗಳ ಅಂತರ ಇದೆ' ಅವಳಿಗೆನಿಸಿತು—ನಾನಂತೂ ಈ ಎರಡನೇ ಧ್ರುವದ ಮೇಲೆ ಬಂದೆ. ಇನ್ನು ಇಲ್ಲಿ ಏನು ಕಾಣಿಸಬಹುದು? ಏನೇ ಕಾಣಿಸಲಿ. ಮೊದಲನೇ ಧ್ರುವವು ಕಾಣಿಸುವದಿಲ್ಲವೆಂಬದಂತೂ ನಿಶ್ಚಿತ!

ತನ್ನ ಈ ವಿಚಿತ್ರ ಕಲ್ಪನೆಯಿಂದ ಅವಳಿಗೆ ತನ್ನೊಳಗೆ ಆಶ್ಚರ್ಯ ವಾಯಿತು. 'ಮೊದಲನೇ ಧ್ರುವವು ಕಾಣಿಸುವದಿಲ್ಲವೆಂಬದಂತೂ ನಿಶ್ಚಿತ' ಎಂಬ ವಿಚಾರವು ಮನಸ್ಸಿನಲ್ಲಿ ಬರುತ್ತಲೇ ಅವಳು ಆಕಾಶದ ಕಡೆಗೆ ನೋಡಿದಳು. ಮುಂಬಯಿಯಲ್ಲಿ ಅವಳು ಮನೆಯಿಂದ ಹೊರಬಿದ್ದ ದಿವಸ ಆಕಾಶವು ಇಂದಿನಂತೆ ಲಕಲಕಿಸುತ್ತಿತ್ತು. ಅವಳು ಮೇಲೆ ನೋಡುತ್ತಿದ್ದುದನ್ನು ನೋಡಿ ಮುದುಕಿಯೆಂದಳು—'ಕಾಲಾಗ ನೋಡಿ ಕೊಂಡು ನಡೀ ಕೃಷ್ಣಾ!'

'ಇದೇ ಕಾಣಸಲಿಕ್ಕೆ ಹತ್ತಿದ ಆ ನಕ್ಷತ್ರ ಎಷ್ಟು ಚೆಂದ ಕಾಣಸ ತಾವ ನೋಡು!' ಎಂದು ವತ್ಸಲೆಯೆಂದಳು.

'ಅದ ನೋಡು ಏನೋ ಸರಸರ ಅಂತು ಅಲ್ಲಿ' ಎಂದು ಮುದು ಕಿಯು ಸೋನ್ಯಾನನ್ನು ತನ್ನ ಕಡೆಗೆ ಎಳೆದುಕೊಂಡಳು.

ವತ್ಸಲೆ ಕೇಳಿದಳು 'ಅದೇನು?'

'ಹಾವು ಇದ್ದೀತು. ಸುಧಾರಿಸಿದ ಮಂದಿ ಹ್ಯಾಂಗ ಸಂಜೇನಾಗ ಹವಾ ತಿಲ್ಲಿಕ್ಕೆ ಹೊರಬೀಳತಾರ ಹಾಂಗ ಹಾವುಗೀವು ಕೂಡಾ ಹೊರ ಬೀಳತಾವ!'

ಮುದುಕಿಯ ಈ ವಾಕ್ಯವು ಮತ್ತೆ ಯಾವಾಗಾದರೆ ವತ್ಸಲೆಗೆ ಮೋಜು ಅನಿಸುವಂತಿತ್ತು. ಆದರೆ ಅವಳ ಸ್ವಂತ ಮನದಲ್ಲಿಯ ಒಂದು ಕಲ್ಪನೆಯಲ್ಲಿಯೆ ಈಗ ಅವಳು ಲೀನಳಾಗಿದ್ದಳು.

ಸಂಜೆಯಾದ ಕೂಡಲೆ ನಕ್ಷತ್ರಗಳು ಹೊಳೆಯತೊಡಗುತ್ತವೆ. ಅವೆಷ್ಟು ಚೆಂದ ಕಾಣುವವಲ್ಲ! ಸಂಜೆಯಾದ ಕೂಡಲೆ ಹಾವುಗಳೂ ಹೋರುಗಳಿಂದ ಹೊರಬಿದ್ದು ತಿರುಗಹತ್ತುತ್ತವೆ. ಅವೆಷ್ಟು ಭಯಂಕರ ಇರುತ್ತವೆ!

'ನೆರಳಿಲ್ಲದ ಬೆಳಕನ್ನೊಂದೇ ಕಂಡವರಾರುಂಟು? ಚಿತ್ರವಾಗು ವದು, ನೆರಳು ಬೆಳಕಿಗೆ ಜಿದ್ದೊಡನೆ ಗಂಟು.'

ತನ್ನ ಆಯುಷ್ಯದಲ್ಲಿಯ ಮೊದಲನೇ ಫೋಟೋ ಕೂಲಿಯವಳ ವೇಷದಲ್ಲಿ ಹೊರಟಿತೆಂಬುದರಿಂದ ಅವಳಿಗೆ ಕ್ಷಣಹೊತ್ತು ಅಭಿಮಾನವೇ ಅನಿಸಿತು. ಕೂಡಲೆ ಅವಳ ಮನಸಿನಲ್ಲಿ ಬಂತು–ಈ ಫೋಟೋ ಛಾಪಿಸು ವದಾದರೆ–ರಮಾಕಾಂತನ ದೃಷ್ಟಿಗೆ ಬೀಳಬಹುದು, ಆಗ—

ದಾದಾ ಅವರು ಸ್ವಲ್ಪ ದೂರ ಹೋದ ಕೂಡಲೆ ಅವಳು ವಿದ್ಯಾಧರ ನಿಗೆ ಕೇಳಿದಳು: 'ಈ ಫೋಟೋ ಏನು ಮಾಡುವವರು?'

'ಪುಸ್ತಕದೊಳಗೆ ಹಾಕಬೇಕಾಗಿದೆ ಇವನ್ನು'

'ನಿಮ್ಮ ಯಂತ್ರದ ಪುಸ್ತಕವಲ್ಲವೇ?'

'ಛೇ! ಆ ರಮಾಕಾಂತನು ಕಾರಖಾನೆಯ ವಿಷಯಕ್ಕೆ ಒಂದು ಪುಸ್ತಕವನ್ನು ಬರೆಯುವವನಿದ್ದಾನೆ!'

ವತ್ಸಲೆ ಮೋರೆಯು ಒಮ್ಮೆಲೆ ಬಿಳುಪಿಟ್ಟಿತು. ದಾದಾ ಅವರು ಅತ್ತ ಕಡೆಗೆ ಒದರಿ ಹೇಳುತ್ತಿದ್ದರು—'ನಾಳೆಸಿಂದ ಕೆಲಸ ಬಂದ'

ವಿದ್ಯಾಧರನಿಗೆನಿಸಿತು—ಅದು ಅವರ ಘೋಷಣೆಯ ಪರಿಣಾಮ ವಿರಬೇಕೆಂದು.

---

## ೧೦

# ಧ್ರುವ ಒಂದೋ? ಎರಡೋ?

ಬಾಪ್ಪಾ ಅವರು ಸಂಜೆಗೆ ಬಾಜಾರದ ಚೌಕಿನಲ್ಲಿ ಮೋಟರಿನಿಂದ ಇಳಿದರು. ಕಾರಖಾನೆಯ ಕಡೆಗೆ ಹೋಗಲಿಕ್ಕೆ ಮೋಟರು–ರಸ್ತೆ ಇರ ಲಿಲ್ಲವೆಂದಲ್ಲ, ಆದರೆ ಒಬ್ಬನನ್ನೇ ಇಳಿಸುವದಕ್ಕಾಗಿ ಮೋಟರನ್ನು ಒಂದು ಕಡೆಗೆ ಒಯ್ಯುವದೆಂದರೆ ಅವರ ತತ್ವಕ್ಕೇ ಅದು ವಿರುದ್ಧವಾಗಿತ್ತು. ಕಾರಖಾನೆಯು ಚೌಕಿನಿಂದ ಚಲೋ ಎರಡು ಮೂರು ಫರ್ಲಾಂಗು

ದೂರ ಇತ್ತು. ಆದರೆ ವಿಮಾನವು ಆಕಾಶದಲ್ಲಿ ಎತ್ತರವಾಗಿ ಹಾರುತ್ತಿದ್ದರೂ ನೆಲದ ಮೇಲೆ ಅದರ ಸಪ್ಪಳವು ಕೇಳಬರುವದಿಲ್ಲವೆ? ಹಾಗೆಯೆ ನೂರಾರು ಜನರಿಂದ ಸಂದಣಿಸಿದ ಆ ಕಾರ್ಖಾನೆಯು ಗದ್ದಲವು ಚೌಕಿನಲ್ಲಿ ಸದಾ ಕೇಳಬರುತ್ತಿತ್ತು. ಆದರೆ ಮೋಟರಿನಿಂದ ಇಳಿದ ಕೂಡಲೆ ತಮಗೆ ಪರಿಚಿತವಾದ ಆ ಕಲಕಲಾಟವು ಕೇಳಿಬರದದ್ದರಿಂದ ಬಾಪ್ಪಾ ಅವರಿಗೆ ತಪ್ಪಿಸಿಕೊಂಡಂತಾಗಿತ್ತು. ಖಾದಿಯ ಚೀಲವನ್ನು ಬಗಲಿಗೆ ಹಾಕಿಕೊಂಡು ಅವರು ಬಾಜಾರದಲ್ಲಿ ಹೋಗಹತ್ತಿದರು. ಬಲದ ಒಂದು ಅಂಗಡಿಯು ಕಡೆಗೆ ಅವರ ದೃಷ್ಟಿ ಹೋಯಿತು. ಅದು ಜಪಾನೀ ಮಾಲಿನಿಂದ ತುಂಬಿತ್ತೆಂಬದು ಅವರಿಗೆ ಸ್ಪಷ್ಟವಾಗಿ ಕಾಣಿಸಿತು. ಎಡಕ್ಕೆ ನೋಡಿದರು. ಅತ್ತ ಕಡೆಯ ಅಂಗಡಿಯಾದರೂ ತನ್ನ ಪ್ರತಿಸ್ಪರ್ಧಿಯೊಡನೆ ಮೇಲಾಡಲಿಕ್ಕೆ ಅವೇ ಶಸ್ತ್ರಗಳನ್ನು ಸಜ್ಜು ಮಾಡಿತ್ತು. ಬಾಪ್ಪಾ ಅವರ ಕಣ್ಣೆದುರಿಗೆ ೧೯೩೦ನೇ ವರ್ಷ ನಿಂತಿತು. ತನ್ನ ಅಕ್ಕನ ಸ್ಮರಣಾರ್ಥವಾಗಿ ಕಟ್ಟಿದ ದೀಪಸ್ತಂಭದ ಮೇಲೆ ನಿಂತು ಅವರು ಜನರ ಕಡೆಯಿಂದ ಸ್ವದೇಶಿಯ ಶಪಥವನ್ನು ತೆಗೆದುಕೊಂಡಿದ್ದರು. ದೇವಾಲಯದ ಮುಂದಿಟ್ಟ ಒಂದು ತೆಂಗಿನಕಾಯನ್ನು ಮುಟ್ಟಿ ಪ್ರತಿಯೊಬ್ಬ ವ್ಯಾಪಾರಿಯೂ ಆಣೆ ಮಾಡಿದ್ದ. ಆ ದಿವಸ ಬಾಪ್ಪಾ ಅವರ ಆಶೆಗಳು ಆ ದೀಪಸ್ತಂಭಕ್ಕಿಂತಲೂ ಮೇಲೆ ಏರಿದ್ದವು. ಆದರೆ ಈಗ ಅವರಿಗೆನಿಸಿತು, ಅವೆಲ್ಲ ಉಸುಬಿನಲ್ಲಿ ಕಟ್ಟಿದ ಮಂದಿರಗಳೇ ಎಂದು. ೧೯೩೦ರಿಂದ ಜೇಲಿಗೆ ಹೋಗುವ ಕಾರ್ಯಕ್ರಮವೇ ಸುರುವಾದ್ದರಿಂದ ಅವರಿಗೆ ಕಾಮಾಪುರಕ್ಕೆ ಬರುವದಾಗಿದ್ದಿಲ್ಲ. ಇಂದು ಅವರು ಬಂದರೆ ಅವರ ಹೃದಯಕ್ಕೆ ಭೂಕಂಪದಂಥ ಧಕ್ಕೆ ಕುಳಿತಿತು.

ಮೂರು ನಾಲ್ಕು ಅಂಗಡಿಗಳನ್ನು ದಾಟಿ ಹೋಗುವದರಲ್ಲಿ ಒಂದು ಅಂಗಡಿಯುಲ್ಲಿ ಇಸ್ಪೇಟಿನ ಆಟವು ನಡೆದದ್ದು ಕಂಡು ಬಂತು. ತೆಳ್ಳನ್ನ ಮುಲಮುಲಿನ ಲಂಡಂಗಿಗಳನ್ನು ತೊಟ್ಟ ನಾಲ್ಕಾರು ಜನರು ಆ ಕಾಗದೀ ರಾಜಕಾರಣದಲ್ಲಿ ಮಗ್ನರಾಗಿದ್ದರು. ಅವರಲ್ಲಿ ಪ್ರತಿಯೊಬ್ಬನೂ ಬಾಪ್ಪಾ ಅವರ ಗುರುತಿನವನಿದ್ದನು. ಐವತ್ತರ ಸಮೀಪಕ್ಕೆ ಬಂದಿದ್ದರೂ ಡೌಲಿನ

ಸಂಜಾಪವನ್ನಿಟ್ಟುಕೊಂಡು ಕೆಂಪುತುಟಿಗಳಿಂದ ಅಂಗಡಿಯ ಮುಂದೆ ಓಕಳಿ ಹೊಡೆಯುವ ಆ ವ್ಯಾಪಾರಿ—ಅವನ ಸರಿಯಂಥ ನೋಟವು ಬಾಪ್ಪಾ ಅವರಿಗೆ ನೆನಪಾಯಿತು. ಕಾಯದೆಭಂಗದ ಕಾಲಕ್ಕೆ ಅವನು ಕೂಗಿ ಹೇಳುತ್ತಿದ್ದ—'ನೀವೆಲ್ಲರೂ ಕಾಪಸಾಪುರದ ಹೆಸರು ಕಾಯಬೇಕು!' ಆ ಹೆಸರು ಕಾಯಲಿಕ್ಕೆ ಇಂದು ಅವನು ನಡೆಸಿದ ಉದ್ಯೋಗವನ್ನು ಕಂಡು ಬಾಪ್ಪಾ ಅವರ ಮನಸು ದಿಕ್ಕೆಟ್ಟು ಹೋಯಿತು. ಅವನ ಎದುರಿಗಿದ್ದ ಆ ಇಪ್ಪತ್ತೈದರೊಳಗಿನ ತರುಣ—ಅವನ 'ಧೈರ್ಯಧರೀ' ಕಟ್ಟು, ಮೈಯಲ್ಲಿಯ ತಿಳುವು ರೇಶ್ಮಿಯ ಅಂಗಿ, ಆಟದಲ್ಲಿ ಗುಂಗಾದ ಅವನ ಮನಸ್ಸು ಇದೆಲ್ಲವನ್ನು ನೋಡಿ ಬಾಪ್ಪಾ ಅವರಿಗೆನಿಸಿತು—ಮನುಷ್ಯರ ಮನವು ಪುಚ್ಚಕ್ಕಿಂತಲೂ ಚಂಚಲವಿರಬಹುದೇ ಎಂದು. ಈ ತರುಣನು ಮೊದಲನೇ ಸಾರೆಯ ಕಾಯದೆಭಂಗದಲ್ಲಿ ಆನಂದದಿಂದ ತುರಂಗವಾಸವನ್ನು ಭೋಗಿಸಿದ್ದನು. ದಂಡ ಕೊಡುವಷ್ಟು ಮನೆಯಿಂದ ಸ್ಥಿತಿವಂತನಿದ್ದೂ ಸಶ್ರಮ ಶಿಕ್ಷೆಯನ್ನು ಭೋಗಿಸಿದ್ದನು. 'ಮಿಾನವಿಲ್ಲದೆ ತುತ್ತು ಗಂಟಲಲ್ಲಿಳಿಯುವದಿಲ್ಲೆಂದು ಜನರು ವರ್ಣಿಸುತ್ತಿದ್ದರೂ ಇವನು 'ಕ' ವರ್ಗದ ಅನ್ನವನ್ನು ಆನಂದದಿಂದ ಉಂಡಿದ್ದನು. ತುರಂಗದಲ್ಲಿ ಚಳವಳಿಯ ಬಗ್ಗೆಯೂ ಸಮಾಜಸುಧಾರಣೆಯ ಬಗ್ಗೆಯೂ ಈ ತರುಣನೊಡನೆ ಮಾತಾಡುವಾಗ ದಾದಾ ಅವರ ರಸವಾಣಿಗೆ ಪೂರು ಬಂದುಬಿಡುತ್ತಿತ್ತು. ಆದರೆ ಈಗ ಅವನನ್ನು ನೋಡಿದ ಮಾತ್ರಕ್ಕೆ ನೀರೆಲ್ಲಾ ಬಾರಲು ಕೊಡದ ಮೇಲೆ ಸುರುವಿದಂತಾಯಿತೆಂದು ಅವರಿಗೆ ತಿಳಿದು ಹೋಯಿತು.

ಆಡುವವರಲ್ಲಿ ಯಾವನೋ ಸಹಜವಾಗಿ ರಸ್ತೆಯಕಡೆಗೆ ನೋಡಿದ. 'ಬಾಪ್ಪಾ' ಎಂದು ಗುಣುಗುಣಿಸಿದನು. ಆಡುವವರು ಭಯಚಕಿತರಾಗಿ ನೋಡಹತ್ತಿದರು. ಅವರು ಬಾಪ್ಪಾ ಅವರಿಗೆ ನಮಸ್ಕಾರ ಮಾಡಿದರು.

'ವಂದೇ ಮಾತರಮ್'

'ಯಾವಾಗ ಬಂದಿರಿ?'

ಮುಂದೆ ಯಾರು ಏನು ಮಾತಾಡಬೇಕು? ಅವರೆಲ್ಲರೂ ಯಾಕೆ ಬೆಚ್ಚಿದರೆಂಬದು ಬಾಪ್ಪಾ ಅವರಿಗೆ ತಿಳಿಯಿತು. ಅವರು ರೊಕ್ಕ ಹಚ್ಚಿ

ಇಸ್ಪೀಟು ಆಡುತ್ತಿದ್ದರು. ಕಾಮಾಪುರದಂಥ ಸ್ಥಳದಲ್ಲಿ ಪೋಲೀಸರ ಕೈ ಬೆಚ್ಚಗೆ ಮಾಡಿದರೆ ಭರತಿ ಚೌಕಿನಲ್ಲಿ ಸಹ ಬೇಕಾದ್ದನ್ನು ಮಾಡ ಬಹುದೆಂಬದು ಬಾಪ್ಪಾ ಅವರಿಗೆ ಗೊತ್ತಿರಲಿಲ್ಲವೆಂದಲ್ಲ. ಅವರು ಮನ ದಲ್ಲಿಯೆ ಅಂದರು 'ಈ ಅಶಿಕ್ಷಿತ ವ್ಯಾಪಾರಿಗಳ ಮಾತೇಕೆ? ಒಳ್ಳೊಳ್ಳೇ ಡಾಕ್ಟರರೂ ವಕೀಲರೂ ಮಾಸ್ತರರೂ ಇದೇ ಆಟವಾಡುತ್ತಿದ್ದುದನ್ನು ನಾನು ಮೊನ್ನೆ ನೋಡಿಲ್ಲವೆ?'

ಬಾಪ್ಪಾ ಅವರು ಖಿನ್ನ ನಿಶ್ವಾಸವನ್ನು ಬಿಟ್ಟು ಮೇಲೆ ನೋಡಿದರು. ಆಕಾಶದಲ್ಲಿ ಬಿಳಿಯ ಮೋಡಗಳು ಕಾಣಿಸುತ್ತಿದ್ದವು. ಬಾಪ್ಪಾ ಅವರ ಮನದಲ್ಲಿ ಬಂತು—ಇನ್ನು ಸ್ವಲ್ಪ ವೇಳೆಯಲ್ಲಿ ಈ ಮೋಡಗಳಿಗೆ ಬಣ್ಣ ಬರಬಹುದು; ಇವು ವಿವಿಧವಾದ ಮನೋಹರ ರೂಪಗಳನ್ನು ಧರಿಸ ಬಹುದು, ಆದರೆ ಇವುಗಳ ಬಣ್ಣ ನಿಜವೆನ್ನಬೇಕೆ? ನೀರಿದ್ದರೆ ಕಪ್ಪು, ಇಲ್ಲದಿದ್ದರೆ ಬಿಳಿ. ಇದೇ ಮೋಡದ ಬಣ್ಣ. ಮನುಷ್ಯರೂ ಹಾಗೆಯೆ. ಅವರ ಕ್ಷಣಿಕ ಸ್ಥಿತ್ಯಂತರಗಳನ್ನೇನು ನಿಜವೆನ್ನುವದೆ? ಮನುಷ್ಯರ ನಿಜ ವಾದ ಜಾತಿಗಳು ಎರಡೇ—!

ತುಪ್ಪವನ್ನು ತೆಗೆದ ಜೇನುಹುಟ್ಟಿನಂತೆ ತೋರುವ ಕಾರಖಾನೆ ಯನ್ನು ನೋಡಿ ಬಾಪ್ಪಾ ಅವರ ಆಶ್ಚರ್ಯಕ್ಕೆ ಸೀಮೆಯೇ ಉಳಿಯ ಲಿಲ್ಲ. ಒಳಗೆ ಬರೀ ಮೂರು ಜನರು ಮಾತ್ರ ಇದ್ದರು. ದಾದಾ, ಕಾರ ಕೂನ, ವಿದ್ಯಾಧರ. ಬಾಪ್ಪಾ ಅವರನ್ನು ಕಂಡಕೂಡಲೆ ದಾದಾ ಕುಳಿ ತಲ್ಲಿಂದ ಎದ್ದು 'ಓಹೋಹೋ ಬಾಪ್ಪಾ ಬಂದರು' ಎಂದರು.

ವಿದ್ಯಾಧರನು ಮಾಡಿದ ನಮಸ್ಕಾರವನ್ನು ಬಾಪ್ಪಾ ಮೂಕತನ ದಿಂದಲೇ ಸ್ವೀಕರಿಸಿದರು. ದಾದಾ ಅವರ ಕಡೆಗೆ ತೀವ್ರದೃಷ್ಟಿಯಿಂದ ನೋಡುತ್ತ ಕೇಳಿದರು—'ಇಂದು ಕಾರಖಾನೆ ಬಂದ ಇದ್ದ ಹಾಗೆ ಹಾಗೆ ತೋರತದೆ'

'ಇಂದು ಯಾಕೆ? ನಾಳೆ, ನಾಡದು—'

'ಅಂದರೆ?'

'ಕಾಯಮ್ ರಜಾನೇ ಇನ್ನು'

ಬಾಪ್ಪಾ ಅವರಿಗೆ ಸಿಟ್ಟು ಬಂದಿತು. ಆದರೆ ಅವರು ಅದನ್ನು ಮೇಲೆ ತೋರಗೊಡಲಿಲ್ಲ. ದಾದಾ ರುಮಾಲು ಸುತ್ತಿಕೊಳ್ಳಹತ್ತಿರುವದನ್ನು ನೋಡಿ ಬಾಪ್ಪಾ ಕೇಳಿದರು—

'ಎಲ್ಲಿ ಹೊರಟಿರಿ?'

'ದೇವೀ ಗುಡಿಗೆ'

'ಇಷ್ಟು ವರ್ಷ ಆದವು. ಆದರ ಪ್ರತಿದಿವಸ ಸಂಜೀಮುಂದ ದೇವರ ದರ್ಶನ ಏನು ತಪ್ಪಿಲ್ಲ ನೋಡ್ರಿ. ಮೈಯಾಗ ನೆಟ್ಟಗಿರದಿದ್ದರ ಸುಲೂತಾಯಿನ್ನರ ನನ್ನರ ಕಳಿಸಿ ಅಂಗಾರವನ್ನಾದರೂ ತರಸತಾರ' ಎಂದು ಕಾರಕೂನನು ನಡುವೇ ಬಾಯಿಹಾಕಿದ.

'ದೇವರು ಒಬ್ಬರನ್ನಾದರೂ ಕಾಯುತಾನನ್ನಬೇಕು ಹಾಗಾದರೆ' ಎಂದು ಬಾಪ್ಪಾ ಅವರು ಅಣಕವಾಡುವ ಸ್ವರದಿಂದ ನುಡಿದರು.

'ಕಾಯುತಾನಂದರ? ನಮ್ಮ ಕಮಲೇಶ್ವರೀ ಅಂದರ ಭಾರೀ ಜಾಗೃತ ದೇವರು. ಇಂದಿನ ಮಿತಿಗೆ ಈ ಊರೊಳಗಿನ ಅರ್ಧ ಸೀದಾ ಈ ಕಾರಖಾನಿಯೊಳಗಿಂದ ಹೋಗತದ—' ಕಾರಕೂನನು ತನ್ನ ಹೊತ್ತಿಗೆ ಬಿಚ್ಚಿದ.

'ಸುಮ್ಮಗೆ ಕೂಡು ಮಾತುಬುರಕ! ಈಗ ಯಾರಿಗೆ ಬೇಕು ಈ ಜಮಾನು ಬಾಪ್ಪಾ? ಸರಕಾರಿ ತೆರಿಗೆಯಷ್ಟು ಸಹಿತ ಲಾವಣಿ ವಸೂಲು ಇಲ್ಲ'

'ಬಾಪ್ಪಾ ಪುನಃ ಪುನಃ ಆ ಶೂನ್ಯವಾದ ಕಾರಖಾನೆಯ ಕಡೆಗೆ ನೋಡುತ್ತಿದ್ದರು. ಅವರಿಗೆ ಅದು ಸ್ಮಶಾನದಂತೆ ತೋರಿತು. ಆ ಕಡೆಯ, ಆ ಗೋಡಂಬಿ ಸುಡುವ ಭಟ್ಟಿ—ಚಿತೆಯ ಎನ್ನುವಂತೆ ತೋರಿತು. ದಾದಾ ಮತ್ತು ಕಾರಕೂನ ಇವರಿಬ್ಬರು ಈ ಸ್ಮಶಾನದಲ್ಲಿ ಉತ್ತರಕ್ರಿಯೆ ಮಾಡಿಸುವ ಬ್ರಾಹ್ಮಣರು. ಪ್ರೇತಗಳ ನೆತ್ತಿಯಮೇಲಿನ ಬೆಣ್ಣೆಯನ್ನಾದರೂ ತಿಂದಾರು. ಆದರೆ—

ದಾದಾಸಾಹೇಬರು ಯಾವಾಗಲೋ ರುಮಾಲು ಸುತ್ತಿಕೊಂಡು ತಯಾರಾಗಿದ್ದರು. ಅವರಂದರು—'ಯಾಕರಿ ಬಾಪ್ಪಾ ಬರತೀರೇನು ದೇವೀ ಗುಡಿಗೆ?'

'ನಾ ಏನು ಮಾಡುವದದೆ ದೇವೀ ಗುಡಿಗೆ ಬಂದು? ಊರಾಗಿನ ಅರ್ಧ ಹೊಲ ತಗೊಳ್ಳುವದು ಅಷ್ಟರೊಳಗs ಅದೆ'

'ಆದರೆ, ಬಡಬಗ್ಗರ ಕಲ್ಯಾಣ ಮಾಡುವದದಲ್ಲ' ಎಂದು ಮಾತಿನ ಪೆಟ್ಟುಕೊಡುವ ಸ್ವರದಿಂದ ದಾದಾ ಅಂದರು.

'ಅದನ್ನು ಯಾರು ಮಾಡುವರು?'

'ದೇವಿ'

'ಬಡವರ ಕಲ್ಯಾಣ ಮಾಡುವ ಶಕ್ತಿ ದೇವರಲ್ಲಿದ್ದರೆ—'

'ಗಾಂಧಿ ನಿಮ್ಮ ಹಾಗೆ ನಾಸ್ತಿಕ ಇಲ್ಲರಿ ಬಾಪ್ಪಾ'

'ನಿಮ್ಮ ಹಾಗೆ ನಿರ್ದಯನೂ ಇಲ್ಲ'

ದಾದಾ ತಿರಸ್ಕಾರದಿಂದ ಬಾಪ್ಪಾ ಅವರ ಕಡೆಗೆ ನೋಡಿದರು. ಎಲ್ಲರೂ ಕಾರಖಾನೆಯಿಂದ ಹೊರಬಿದ್ದರು. ಬಾಪ್ಪಾ ವಿದ್ಯಾಧರನಿಗಂದರು—'ನಡೀರಿ ನಾವೂ ತಿರುಗಾಡಲಿಕ್ಕೆ ಹೋಗೋಣ'

'ಯಾವ ಕಡೆ?'

'ಕೆರೆಯ ಕಡೆ'

ಅವರಿಬ್ಬರ ಹಾದಿಯೂ ದಾದಾಸಾಹೇಬರ ಹಾದಿಯೂ ಒಂದೇ ಆಗಿತ್ತು. ಸ್ವಲ್ಪ ವೇಳೆ ಎಲ್ಲರೂ ಸುಮ್ಮನಿದ್ದರು. ಚೌಕು ದಾಟಿದ ಮೇಲೆ ಬಾಪ್ಪಾ ಕೇಳಿದರು:

'ಕಾರಖಾನೆ ಬಂದ ಯಾಕ ಮಾಡಿದಿರಿ?'

ದಾದಾನ ಮನಸ್ಸಿನಲ್ಲಿ ಕೂಲಿಯನ್ನು ಕಡಿಮೆ ಮಾಡುವದಿತ್ತು. ಆದರೆ ಅಷ್ಟರಲ್ಲಿ ಶಾಮಾಪುರಕ್ಕೆ ಬಾಪ್ಪಾ ಅವರ ಸ್ವಾರೀ ಬರುವದಿದೆ ಎಂದು ತಿಳಿದ ಕೂಡಲೆ ಅವರು ಕಾರಖಾನೆಯನ್ನು ಬಂದ ಇಡುವ ಯುಕ್ತಿಯನ್ನು ಹೂಡಿದ್ದರು. ಬಾಪ್ಪಾ ಅವರ ಪ್ರಶ್ನೆಗೆ ಅವರು ಉತ್ತರ ಕೊಟ್ಟರು—

'ಲಾಭವಿಲ್ಲೆಂದು'

'ಹಾನಿ ಏನೂ ಇಲ್ಲಲ್ಲ'

'ಹಾನಿ ಆದರೂ ಆಗುವ ಅಂಜಿಕೆ ಅದೆ'

'ಆದರೆ ಆಯ್ತು. ಒಂದು ತೆಂಗಿನ ಗರಿ ತುಡುಗಾಗಿ ಹೋದರೆ ತೆಂಗಿನ ಗಿಡದ ಉತ್ಪನ್ನ ಕಡಿಮೆ ಆಗುವದು ಅಷ್ಟರೊಳಗs ಅದೆ'

'ನಾ ಕುಟುಂಬವತ್ಸಲ ಇದ್ದೀನಿ ಬಾಪ್ಪಾ. ನಿಮ್ಮ ಹಾಗೆ ಸಡೇ ಸೋಟ ಇದ್ದರೆ..'

'ಇದ್ದೂ ಬಿದ್ದೂ ಅದೊಂದು ಹುಡುಗಿ ಹೌದಲ್ಲೊ?'

'ಒಂದು ಹುಡುಗಿ? ಆನೆ ಸಾಕಬಹುದು, ಲಗ್ನದ ಹುಡುಗಿ ಬೇಡ ನೋಡಿರಿ ಈಗಿನ ದಿವಸದಾಗ?'

'ಹುಡುಗಿ ಈಗ ತಿನಸುಬಕ್ಕ ಆದಳೇನು ದಾದಾ?'

'ನಿಮ್ಮ ಆಗ್ರಹಕ್ಕೆ ಆಕೆಯನ್ನು ಈ ಚಿತ್ರಕಲೆ ಕಲಿಯಲಿಕ್ಕೆ ಹಾಕಿದೆ. ಆಕೆಗೆ ಎಲ್ಲಾ ಬರೀ ಚೆಂದ ಬೇಕಾಗಲಿಕ್ಕೆ ಹತ್ತಿತು. ಈ ಜರದ ಪತ್ತಲ ಬೇಡ, ಆ ವಜ್ರದ ಹರಳು ಬೇಡ—ಇಷ್ಟಲ್ಲದೆ ನಾಳೆ ಚಲೋ ಗಂಡ ಸಿಗಲಿಕ್ಕೆ ಹತ್ತಿಪ್ಪತ್ತು ಸಾವಿರ ಆದರೂ ಬೇಕು'

'ಪೈ ಸಹಿತ ಬೇಡ'

'ಆಕೆ ಲಗ್ನ ಮಾಡಿಕೊಳ್ಳುವದಿಲ್ಲ ಅಂತ ನೀವು ತಿಳಿದು ಹೊರಟೀರಿ ಬಾಪ್ಪಾ! ಈ ಹುಡುಗರಂದರ ಗೋಡಂಬಿ ಬೀಜ! ಮೊದಲು ಒರೀ ಹಸರುಕಾಯಿ, ಮುಂದೆ ಮೆಲ್ಲಗೆ ಕೆಂಪು ಹಣ್ಣು'

'ನಾ ಅನ್ನುವದು ಹಾಗಲ್ಲ. ಸುಲೂ ಲಗ್ನ ಮಾಡಿಕೊಳ್ಳುವ ದಿಲ್ಲಂತಲ್ಲ. ಒಳ್ಳೇ ಚೆಲುವ ಚಿತ್ರದಂಥ ಗಂಡನ್ನ ಹುಡುಕಿಕೊಂಡು ಬರ ತಾಳೆ. ಆದರೆ ನಿಮಗೇನು ಒಂದು ದುಡ್ಡಿನ ಖರ್ಚು ಸಹ ಮಾಡಗೊಡು ವದಿಲ್ಲ.'

ಆ ರಮಾಕಾಂತನದೂ ಈಕೆಯದು ಸಖ್ಯ ಅದೆ ಅಂತ ನೀವು ಈ ತರ್ಕ ಮಾಡಿದ್ದೀರಿ. ಅವನ ಮೊದಲಿನ ಹೆಂಡತಿ ಮೊನ್ನೆ ಮೊನ್ನೆ ತೀರಿ ಕೊಂಡಳಂತೆ. ಮನೆತನ ಏನು ಕೆಟ್ಟದಲ್ಲ. ಪರಂತು ಜಾತಿಯ ಪ್ರಶ್ನೆ ಅಡ್ಡಬರುತ್ತದೆ.

'ಸುಧಾರಣೆಯ ಪ್ರಯೋಗ ಮಾಡಿರಲ್ಲ!'

ಬಾಪ್ಪಾ ಅಂದರು. ವಿದ್ಯಾಧರ ನಕ್ಕ.

'ಮತ್ತು ನಾಟಕ ಕಂಪನಿಯ ಕೂಡ ಅವನದು ನಿತ್ಯದ ಸಂಬಂಧ.

'ಇರವಲ್ಲದು. ಚಲೋ ಧಂದೆ ಅದು.'

'ಚಲೋ ಧಂದೆ! ಇದೆಲ್ಲ ತಿಳಿಯಬೇಕಾದರೆ ಲಗ್ನ ಮಾಡಿಕೊಳ್ಳ ಬೇಕಾಗತದರಿ ಬಾಪ್ಪಾ. ಆ ಕಂಪನಿಯೊಳಗೆ ಒಬ್ಬಾಕೆ ನಟಿ ಇದ್ದಾಳೆ!'

'ನಿಮ್ಮ ಕಾರಖಾನೆಯೊಳಗೆ ನೂರು ಮಂದಿ ಹೆಂಗಸರಿದ್ದಾರೆ.'

'ನಟಿ ಅಂದರ ಚೆಲುವಿ ಇರತಾಳೆ.'

'ನಿಮ್ಮ ಕಾರಖಾನೆಯೊಳಗೆ ಮಾತ್ರ, ಇಷ್ಟು ಮಂದಿ ಹೆಂಗಸ ರೊಳಗೆ ಒಬ್ಬಾಕೆಯೂ ಚೆಲುವೆ ಇರಲಿಕ್ಕಿಲ್ಲ. ಇಷ್ಟು ವರ್ಷ ಇಷ್ಟ ಮಂದಿ ಬಡವರ ಹೆಂಗಸರ ಸಂಬಂಧ ಬಂದರೂ ನೀವು ತೊಳೆದ ಅಕ್ಕಿ ಹಾಗೆ ಇದ್ದೀರೋ ಇಲ್ಲೋ? ದಾದಾ, ನೀವು ತಪ್ಪುವದು ಇಲ್ಲೆ! ತಮ್ಮ ಮೇಲಿಂದ ಜಗತ್ತು ತಿಳಿಯಬೇಕು.'

ಬಂದ ನಗುವನ್ನು ತಡೆಯಲಿಕ್ಕೆಂದು ವಿದ್ಯಾಧರನು ಬೇರೆ ಕಡೆಗೆ ನೋಡಹತ್ತಿದ. ದಾದಾ ಬಲಗಡೆಯ ತೆಂಗಿನ ಬನದ ಕಡೆಗೆ ನೋಡುತ್ತ 'ಅಲ್ಲಿ ನೋಡಿರಿ ಬಾಪ್ಪಾ ಮಾತಾಡುವ ತೆಂಗಿನ ಗಿಡ!'

ಬಾಪ್ಪಾ ನೋಡಿದರು. ಬನದಲ್ಲಿಯ ಕೆಲವು ಗಿಡಗಳ ಮೇಲೆ ಬಿಳೀ ಚೌಕು ಪಟ್ಟಿಗಳಿದ್ದವು ಅವುಗಳ ಮೇಲೆ ಅಂಕಿಗಳೂ ಅಕ್ಷರಗಳೂ ಇದ್ದವು ವಿದ್ಯಾಧರನು ಕೇಳಿದ: 'ಇವೆಂಥ ಗಿಡ?'

'ಅವು ಸುಶಿಕ್ಷಿತ ಅವೆ' ಎಂದು ಬಾಪ್ಪಾ ಖಿನ್ನಸ್ವರದಿಂದ ಉತ್ತರ ಕೊಟ್ಟರು.

'ಅಂದರೆ?'

'ಸಿಂದೀ ತೆಗೆಯಲಿಕ್ಕೆ ಕೊಟ್ಟ ಗಿಡ ಅವು. ಅವುಗಳ ಮೇಲಿನ ಸರಕಾರೀ ನಂಬರ ನೋಡ್ರಿ. ಬರೀ ತೆಂಗಿನ ಗಿಡಕ್ಕೆ ನಂಬರ ಯಾರು ಹಾಕತಾರೆ?'

ದಾದಾ ಅಂದರು—'ಈಗ ಮೂರು ವರ್ಷದ ಹಿಂದೆ ಅಂದಿದ್ದರಲ್ಲ ಇಲ್ಲಿಯವರೆಲ್ಲರು ಸಿಂದೀ ತೆಗೆಯಲಿಕ್ಕೆ ಒಂದು ಗಿಡ ಸಹ ಕೊಡುವ ದಿಲ್ಲಂತ'

ಬಾಪ್ಪಾ ಶೂನ್ಯದೃಷ್ಟಿಯಿಂದ ತೆಂಗಿನ ಗಿಡಗಳ ಕಡೆಗೆ ನೋಡುತ್ತ ನಡೆದಿದ್ದರು.

'ಬಾಪ್ಪಾ ಜಗತ್ತು ಹೀಗೇ ನಡೆಯುವದು ನೋಡಿರಿ' ದಾದಾ ಸಾಹೇಬರ ಕೂಡ ಬಾಪ್ಪಾ–ವಿದ್ಯಾಧರರಿಬ್ಬರೂ ಗುಡಿಯಲ್ಲಿ ಹೋದರು. ದಾದಾಸಾಹೇಬರು ಗಂಟೆಯನ್ನು ಜೋರಿನಿಂದ ಬಾರಿಸಿದ ಕೂಡಲೆ ನಡುವಿನ ಆವಾರದಲ್ಲಿ ಇದ್ದ ಪಾರಿವಾಳಗಳು ಫಡಫಡ ಮಾಡಿದವು. ಗಂಟೆಯನ್ನು ಬಾರಿಸಿ ದಾದಾ ಒಳಗಿನ ಗರ್ಭಗುಡಿಯಲ್ಲಿ ಹೋದರು. ಅಲ್ಲಿ ಅವರು ಸಾಷ್ಟಾಂಗನಮಸ್ಕಾರ ಹಾಕಿದರು. ಆದರೆ ಅದು ಬಾಪ್ಪಾ–ವಿದ್ಯಾಧರರಿಗೆ ಅರ್ಥವೇ ಕಾಣಿಸಿತು. ಗರ್ಭಗುಡಿಯಲ್ಲಿ ಚಲೋ ಕತ್ತಲೆಯೇ ಇತ್ತು. ಒಂದು ಬದಿಗೆ ಸೀರೆಗಳನ್ನು ಸುತ್ತಿದ ನಾಲ್ಕೈದು ಹಿತ್ತಾಳೆಯ ಕಂಬಗಳನ್ನು ನಿಲ್ಲಿಸಿದ್ದರು. ಚಿಕ್ಕ ಗರ್ಭಗುಡಿಯಲ್ಲಿ ದೇವಿಯ ಹತ್ತರ ಮಂದವಾಗಿ ಉರಿಯುತ್ತಿದ್ದ ನಂದಾದೀಪವು ಅಲ್ಲಿಯ ಕತ್ತಲೆಯ ಭಯಾನಕತೆಯನ್ನೇ ಹೆಚ್ಚಿಸುತ್ತಿತ್ತು. ಎಲ್ಲಿಯಾದರೂ ಕಂಬಕ್ಕೊಂದು ಗಡಿಯಾರವನ್ನು ಹಚ್ಚಿರಬೇಕು, ಅದು ಟಿಕ್‌ಟಿಕ್ ಅನ್ನುತ್ತಿತ್ತು. ಮೃತ್ಯುವಿನ ಬಾಗಿಲಲ್ಲಿ ಹೆಜ್ಜೆ ಇಡುವ ಮನುಷ್ಯನ ಗೊರಕೆಯಷ್ಟೇ ಭಯಾನಕವಾಗಿ ಆ ಟಿಕ್‌ಟಿಕ್ ಶಬ್ದವು ಕೇಳಬರುತ್ತಿತ್ತು. ದಾದಾ ಪ್ರದಕ್ಷಿಣೆ ಹಾಕಹತ್ತಿದರು. ಉಸಿರುಗಟ್ಟಿದ ಧೂಪದ ಚಮತ್ಕಾರಿಕ ವಾಸನೆಯನ್ನು ಮೂಸಿ ನೋಡುತ್ತ ಬಾಪ್ಪಾ–ವಿದ್ಯಾಧರರು ಬಾಗಿಲ ಹತ್ತರವೇ ನಿಂತರು. ಆ ಸೀರೆಗಳನ್ನು ಸುತ್ತಿದ ಕಂಬಗಳ ಕಡೆಗೆ ಬೊಟ್ಟು ಮಾಡಿ 'ಇವೇನು' ಎಂದು ವಿದ್ಯಾಧರ ಕೇಳಿದ.

''ತರಂಗ' ಅಂತಾರೆ ಅವಕ್ಕೆ'

'ಗುಡಿಯೊಳಗೆ ಯಾಕ ಇಟ್ಟಾರೆ ಈ ಕಂಬ'

'ಇವನ್ನು ಎತ್ತಿಕೊಂಡರೆ ಮೈಯೊಳಗೆ ದೇವರು ತುಂಬತದೆ'

'ನಾನು ಎತ್ತಿಕೊಂಡರೂ ತುಂಬೀತೇ?'

'ಕಂಡವರಿಗೆ ಅಲ್ಲ. ಮೊದಲೇ ಗೊತ್ತುಮಾಡಿದವರು ಇರಬೇಕಂತೆ! ಇಂಥಾವು ನಮ್ಮ ಈ ಗುಡಿ!'

ಕಡೆಯ ವಾಕ್ಯದೊಡನೆ ಬಾಪ್ಪಾ ಅವರು ಉಸುಗರೆದದ್ದು ವಿದ್ಯಾಧರನಿಗೆ ಸ್ಪಷ್ಟವಾಗಿ ಕೇಳಬಂತು.

'ಈ ವ್ಮೈ ತುಂಬುವದರ ಮೇಲೆ ಬಿಳಿಯುಂಗಿಯವರ ವಿಶ್ವಾಸ ಆದೆ ಏನು?'

'ಕೆಲಸದ ಪೂರ್ತೆ'

'ಉಳಿದ ಕೆಳಗಿನ ಜನರದು?'

'ಭಯಂಕರ! ಮಾತಾಡುವ ಹಾಗಿಲ್ಲ! ಪ್ರತ್ಯಕ್ಷ ದೇವತಾ ಅಂತ ತಿಳೀತಾರೆ ಈ ದೇವೀ ಅಂದರೆ. ಆದರೆ ನಾಳೆ ಕಾರಖಾನೆಯೊಳಗಿನ ಹೆಂಗಸರು ಉಪವಾಸ ಬಿದ್ದು ಸತ್ತರೂ ಸಹ ಈ ದೇವಿಯು ನಿಸ್ಟೆ ಹಾರುವದಿಲ್ಲ'

ಇಷ್ಟರಲ್ಲಿ ದಾದಾ ತಮ್ಮ ಪ್ರದಕ್ಷಿಣೆಯನ್ನು ಮುಗಿಸಿ ಅಂಗಾರ ತೆಗೆದುಕೊಂಡು ಬಂದರು. ಅವರು ಕೈ ಮುಂದೆ ಮಾಡಿದ್ದರಿಂದ ಇವರಿಬ್ಬರೂ ಉಪಾಯವಿಲ್ಲದೆ ತೆಗೆದುಕೊಳ್ಳಲೇಬೇಕಾಯಿತು. ಇದು ದಾದಾ ಸಾಹೇಬರ ಲಕ್ಷ್ಯಕ್ಕೆ ಬರದೆ ಹೋಗಲಿಲ್ಲ. ಅವರಂದರು—'ವಿದ್ಯಾಧರ, ಇಂದಿನತನಕ ನಿಮ್ಮ ಯಂತ್ರದ್ದು ಕೂಡಲೊಲ್ಲದು; ಇದರ ಕಾರಣ ನಿಮ್ಮ ಲಕ್ಷ್ಯದೊಳಗೆ ಬಂತೇ'

'ಯಾತರ ಕಾರಣ! ಶೋಧವೇನು ಹೇಳಿಕೇಳಿ ಬರುವದಿಲ್ಲ'

'ಛೆ! ನಿಮ್ಮ ನಾಸ್ತಿಕತನ ಕಾಡತದೆ ನಿಮ್ಮನ್ನ. ಇಲ್ಲಿ ನೀವು ಬಂದು ತಿಂಗಳಾಯಿತು ಇವೊತ್ತು ಬಂದೀರಿ ದೇವರಿಗೆ. ನಮ್ಮ ದೇವಿಗೆ ಹರಕೆ ಹೊರ್ರಿ. ಅಲ್ಲಿಂದ ನೋಡಿರಿ ಆದರ ಚಮತ್ಕಾರ'

ಮಾತಾಡುತ್ತಾಡುತ್ತ ಮೂವರೂ ಹೊರಗಿನ ದೀಪಮಾಲೆಯ ಹತ್ತಿರ ಬಂದರು. ಅದು ದಾದಾ ಸಾಹೇಬರ ಔದಾರ್ಯದ ಪತಾಕೆಯಾಗಿತ್ತು.

'ಬಾಪ್ಪಾ, ಈ ದೀಪಮಾಲೆಯಾದರೂ ನಿಮ್ಮ ಮನಸ್ಸಿಗೆ ಬರುವದೋ ಇಲ್ಲೊ?' ಎಂದು ದಾದಾ ಕೇಳಿದರು.

ಬಾಪ್ಪಾ ನಕಾರವನ್ನು ಸೂಚಿಸುತ್ತ ತಲೆಯಲ್ಲಾಡಿಸಿದರು.

'ನಿಮ್ಮ ತಂಗಿಯ ಸ್ಮಾರಕ ಆದೆ ಇದು'

'ಖರ್ಚ ಎಷ್ಟಾಯ್ತು ಇದಕ್ಕೆ?'

'ಮೂರುಸಾವಿರ'

'ಇಷ್ಟು ದುಡ್ಡಿನೊಳಗೆ ಬಡವರ ಮನೆ ಎಷ್ಟಾಗತಿದ್ದವು?

'ಆದರೆ ಸುಲೂಗೆ ಎಷ್ಟು ಪ್ರೀತಿ ಈ ಕಂಬದ ಮೇಲೆ. ಪ್ರತಿದಿವಸ ಸಂಜೆಗೆ ಇದರ ಮೇಲೆ ಹೋಗಿ ಕೂಡುವದೆಂದರೆ ಆ ಹುಡುಗಿಗೆ ಎಂಥಾ ಆನಂದ ಆಗತದೆ!'

'ಸುಲೂ ಎಂದು ಬರತಾಳೆ ಮುಂಬಯಿಯಿಂದ?'

'ಮುಂಬಯಿಯೊಳಗಿಲ್ಲ ಆಕೆ ಈಗ'

'ಮತ್ತೆಲ್ಲಿ?'

'ಬೆಳಗಾವಿಯಲ್ಲಿ'

'ಅಲ್ಲಿ ಯಾರಿದ್ದಾರ ಆಕೆಯ ಗುರುತಿನವರು?'

'ಆ ನಟಿ ಮನೆಯನ್ನೇ ಮಾಡಿಕೊಂಡಿದ್ದಾಳಲ್ಲ ಅಲ್ಲೇ! ಅವ— ರಮಾಕಾಂತನೂ ಇದ್ದಾನ ಸಂಗಡ. ಚಿತ್ರದ ದೆಸೆಯಿಂದ ಇದ್ದೀಸಿ ಅಂತ ಬರೀತಾಳೆ ಹಗಲೆಲ್ಲ' ಇದನ್ನು ಹೇಳುವಾಗ ದಾದಾಸಾಹೇಬರ ಸ್ವರವು ಸ್ವಲ್ಪ ಚಮತ್ಕಾರವಾಗಿತ್ತು. ಬಾಪ್ಪಾ ವಿಚಾರದಲ್ಲಿ ಬಿದ್ದಂತೆ ತೋರಿತು.

'ಇಲ್ಲಿ ಎಂದು ಬರತಾಳೆ?' ಎಂದು ಅವರು ಕೇಳಿದರು.

'ಸ್ವಲ್ಪ ಸಿಟ್ಟಿಲೇನೆ ಪತ್ರ ಬರದೀನಿ. ಬಂದಾಳು ಮೂರು ನಾಲ್ಕು ದಿವಸದಲ್ಲಿ. ನಾಳೆ ಎಲ್ಲಾರೂ ಅಂಬೋಲಿಗೆ ಬರತಾರಂತ. ಅಲ್ಲಿ ಒಂದೆ ರಡು ದಿವಸ ಇದ್ದು ಅಲ್ಲಿಂದ ರಮಾಕಾಂತನನ್ನು ಕರಕೊಂಡು ಸುಲೂ ಇತ್ತಕಡೆಗೆ ಬರತಾಳೆ'

ರಮಾಕಾಂತ ಇಲ್ಲಿಗೇಕೆ ಬರುವನೆಂದು ಕೇಳುವದು ಬಾಪ್ಪಾ ಅವರ ಮನಸ್ಸಿನಲ್ಲಿತ್ತು. ಆದರೆ ದಾದಾ ಮೋರೆಯನ್ನು ತಿರುವಿ ದೇವಿಗೆ ನಮಸ್ಕಾರವನ್ನು ಮಾಡಿ 'ಒಳ್ಳೇದು' ಎಂದು ಹೊರಟರು. 'ಬಾಪ್ಪಾ ಗಂಭೀರ ಮುದ್ರೆಯಿಂದಂದರು: 'ವಿದ್ಯಾಧರ, ದೀಪದ ಕೆಳಗೆ ಕತ್ತಲೆ ಯೆಷ್ಟು ಇರುತ್ತದೆ?'

'ದೀಪದ ಆಕಾರದಷ್ಟು'

'ಹಾಗಾದರೆ ದೀಪಮಾಲೆಯು ಕೆಳಗೆ?—ಕೆಳಗಲ್ಲದಿದ್ದರೂ ಸುತ್ತು ಮುತ್ತು ಬಹಳ ಕತ್ತಲೆ ಇರಲಿಕ್ಕೆಬೇಕು; ಅಲ್ಲವೆ?'

ಈ ಪ್ರಶ್ನೆಯನ್ನು ಕೇಳಿ ಬಾಪ್ಪಾ ನಕ್ಕರು. ಆದರೆ ಆ ಹಾಸ್ಯವು ಒಡಕು ಕೊಳಲಿನ ಸ್ವರದಂತೆ ಇತ್ತು.

ಕೆರೆಯ ಒಂದು ಬದಿಯನ್ನು ಸುತ್ತಿಕೊಂಡು ಅವರು ಗುಡ್ಡವನ್ನು ಏರಹತ್ತಿದರು. ಸಣ್ಣ ಕೂಸು ಆಡುತ್ತ ನಗುತ್ತ ತಾಯಿಯ ಮೊಲೆ ಕುಡಿಯುವಂತೆ ಅವರು ಹೆಜ್ಜೆಹೆಜ್ಜೆಗೆ ನಿಲ್ಲುತ್ತ ನಾಲ್ಕೂ ಕಡೆಗೆ ಉಲ್ಲಾಸ ದಿಂದ ನೋಡುತ್ತ ಮೇಲೆ ಏರುತ್ತಿದ್ದರು. ಸಾಯಂಕಾಲದಂಥ ಜಾದೂ ಗಾರನು ಸೃಷ್ಟಿಯಲ್ಲಿ ಇನ್ನೊಬ್ಬನಿಲ್ಲ. ಗೂಡುಗಳ ಕಡೆಗೆ ತಿರುಗಿ ಹೋಗುವ ಕಾಗೆಗಳ ಹಿಂಡುಗಳು, ಕೆರೆಯ ನೀರಮೇಲೆ ಪಸರಿಸಿದ ಹಾವಸೆ, ಗುಡ್ಡದ ಕರೀ ಬಂಡೆಗಳು, ಇವೆಲ್ಲವುಗಳಲ್ಲಿಯೂ ಸಾಯಂಕಾ ಲವು ಆಕರ್ಷಕತೆಯನ್ನು ಹುಟ್ಟಿಸಿತ್ತು. ಕೆರೆಯ ಎದುರಿನ ಬದಿಗೆ ಒಂದು ಕಡೆ ತೆಂಗಿನ ಗಿಡಗಳು ಸಿಪಾಯಿಗಳಂತೆ ನಿಂತಿದ್ದುವು. ಇನ್ನೊಂದು ಕಡೆಗೆ ಬಾಳೆಯ ಗಿಡಗಳು ರಾಜಕನ್ಯೆಯರಂತೆ ನಲಿಯುತ್ತಿದ್ದವು. ವಾಯು ಲಹರಿಯ ಮೃದುಮಧುರ ಸ್ವರವು ಕಿವಿಯಲ್ಲಿ ತುಂಬುತ್ತಲೇ ಯಾವನೋ ಸಮುದ್ರಪರ್ಯಟನ ಮಾಡಿಬಂದ ಪ್ರವಾಸಿಯು ಸ್ವೈರವಾಗಿ ಮನ ಬಿಚ್ಚಿ ಗುಡ್ಡದೊಡನೆಯೂ ಕೆರೆಯೊಡನೆಯೂ ಮಾತಾಡುತ್ತಿದ್ದಂತೆ ಅನಿಸುತ್ತಿತ್ತು. ಗುಡ್ಡದ ತುದಿಗೆ ಏರಿ ಇಬ್ಬರೂ ಸುತ್ತಲೂ ನೋಡಿದರು. ಎದುರಿಗೆ ಆಕಾಶ ಸಮುದ್ರಗಳೆರಡೂ ಯಾರು ಹೆಚ್ಚು ನೀಲವೆಂಬುದನ್ನು ನೋಡಲಿಕ್ಕೆ ಗಲ್ಲಕ್ಕೆ ಗಲ್ಲವನ್ನು ಹಚ್ಚಿ ಕುಳಿತಿದ್ದವು. ಅಂತಃಕರಣದಿಂದ ಉಕ್ಕಿ ಬಂದ ಭಾವನೆಗಳಲ್ಲಿ ವ್ಯಾವಹಾರಿಕ ವಿಚಾರಗಳು ಎಲ್ಲಿಯೋ ಮಾಯವಾಗುವಂತೆ, ಹಚ್ಚಹಸುರಾದ ತೆಂಗಿನ ಬನಗಳಲ್ಲಿ ಕಾರವಾರವು ಅಡಗಿಹೋಗಿತ್ತು. ಗಿಡದ ಗುಂಪಿನೊಳಗಿಂದ ಏಳುವ ಹೊಗೆಯೂ, ಯಾಕೋ ಏನೋ ಕೇಳುತ್ತಿರುವ ಸಪ್ಪಳದ ತಾಲಬದ್ಧವಾದ ಪ್ರತಿ ಧ್ವನಿಯೂ ಊರು ಇಂಥಲ್ಲಿರುವದೆಂದು ತೋರಿಸುತ್ತಿದ್ದವು.

ಹರ್ಷಭರದಿಂದ ಬಾಪ್ಪಾ ನುಡಿದರು: 'ಇದೇ ನಿಜವಾದ ಗುಡಿ'

'ದೇವಿಯೂ ಇದ್ದಾಳೆ ಈ ಗುಡಿಯಲ್ಲಿ' ಎಂದ ವಿದ್ಯಾಧರ.

ಬಾಪ್ಪಾ ಕುತೂಹಲದಿಂದ ಅವನ ಕಡೆಗೆ ನೋಡಿದರು.

ಅವರು ಕುಳಿತ ಬಂಡೆಯ ಹತ್ತಿರವೇ ಹಾಯ್ದು ಗುಡ್ಡದ ಆಚೆಯ ಬದಿಗೆ ಒಂದು ದಾರಿ ಹೋಗಿತ್ತು. ಆ ದಾರಿಯಿಂದ ಗೋಡಂಬಿಯ ಕಟ್ಟಿಗೆಗಳ ಹೊರೆಯನ್ನು ಹೊತ್ತುಕೊಂಡು ವತ್ಸಲೆ ಬರುತ್ತಿದ್ದಳು. ಅವಳನ್ನು ಕುರಿತೇ ವಿದ್ಯಾಧರ ಈ ಮಾತು ಆಡಿದ್ದ. ಅವಳು ಎದುರಿನಲ್ಲಿ ಬಂದ ಕೂಡಲೆ ವಿದ್ಯಾಧರ ಅವಳನ್ನು ಕೂಗಿದ. ಅವಳು ನಿಲ್ಲಲೇಬೇಕಾಯಿತು. ಆದರೆ ಭಾರವಾದ್ದರಿಂದ ಹೊರೆಯನ್ನು ಕೆಳಗಿಟ್ಟು ಅವಳು ನಿಂತಳು.

'ಕೃಷ್ಣಾ, ಇವರು ಬಾಪ್ಪಾ.—ನಿನ್ನ ಕಾಶಿ ಹಗಲೆಲ್ಲ ಇವರ ನೆನಪು ಮಾಡುವಳಲ್ಲ?'

ವತ್ಸಲೆಯು ಅತ್ಯಂತ ಆದರದಿಂದ ಬಾಪ್ಪಾ ಅವರ ಕಡೆಗೆ ನೋಡಿದಳು.

'ಬಾಪ್ಪಾ ಅಂತಿದ್ದರು ನಿಜವಾದ ಗುಡಿ ಈ ಗುಡ್ಡದ ಮೇಲಿದೆ ಅಂತ. ನಾ ಅಂದೆ ಇಲ್ಲಿ ನೋಡ್ರಿ ದೇವೀನೂ ಬರಲಿಕ್ಕೆ ಹತ್ತಿರುವಳು'

ಕಡೆಯ ವಾಕ್ಯವನ್ನು ವಿದ್ಯಾಧರನು ಅಂಜಂಜುತ್ತಲೇ ಆಡಿದ್ದ. ವತ್ಸಲೆಯೊಡನೆ ಅವನು ಯಾವಾಗಲೂ ಸಲಿಗೆಯಿಂದ ಮಾತಾಡುತ್ತಿದ್ದ. ಅದರಿಂದಲೂ, ಇಂದು ಫೋಟೋ ತೆಗೆಯುವದಕ್ಕೆ ಪುನಃಪುನಃ ಅವಳ ಕಡೆಗೆ ನೋಡಬೇಕಾದ್ದರಿಂದಲೂ, ಅವನಿಗೆ ಅವಳೊಡನೆ ಚೇಷ್ಟೆ ಮಾಡುವ ಲಹರಿ ಬಂದಿರಬಹುದು! ಒಳಗಿಂದೊಳಗೇ ಒತ್ತಿಟ್ಟ ಆ ಲಹರಿ ಈಗ ಪ್ರಕಟವಾಯಿತು. ಮಾತಾಡಿದ ಮೇಲೆ ಅವನಿಗೆನಿಸಿತು— ಬಾಪ್ಪಾ ಅವರೊಡನೆ ಆ ಕೋಟಿಕ್ರಮವೇನೂ ಅಷ್ಟಿಯಿರಲಿಲ್ಲ. ಆದರೆ ಕೃಷ್ಣೆಯ ಮೋರೆಯ ಮುಂದೆ—

ಅವನು ಕಲ್ಪಿಸಿದಂತೆ ವತ್ಸಲೆಯು ನಾಚಲೂ ಇಲ್ಲ, ಸಿಟ್ಟಿಗೂ

ಏಳಲಿಲ್ಲ. ಅವರಿಬ್ಬರನ್ನೂ ನೋಡುತ್ತ ಅವಳೆಂದಳು—'ಒಂದೇ ಕಡಿಮೆ ಆದೆ ಈ ದೇವಿಗೆ'

'ಏನದು?'

'ನೈವೇದ್ಯ! ಕಾರಖಾನೆಯಂತೂ ಬಂದು ಬಿದ್ದಿತು'

'ನಾಳೆ ಮಧ್ಯಾಹ್ನದ ಚಿಂತೆ ಇವೊತ್ತು ಸಂಜೆಗೆ ಮಾಡಬಾರದು

'ಈ ನಿಯಮವು ಶ್ರೀಮಂತರ ದೆಸೆಯಿಂದ ಅದೆ. ಬಡವರಿಗೆ—'

ವತ್ಸಲೆಯ ಈ ಉತ್ತರವನ್ನು ಕೇಳಿ ಬಾಪ್ಪಾ ಸ್ತಂಭಿತರಾದರು. ಗೋಡಂಬಿಯ ಕಾರಖಾನೆಯಲ್ಲಿ ಕೆಲಸ ಮಾಡುವ ಕೂಲಿಕಾರ ಹುಡುಗಿ ಮಾತಾಡುತ್ತಾಳೆ, ಅದರಲ್ಲಿಯೂ ಕಲಿತವರಂತೆ ಮಾತಾಡುತ್ತಾಳೆ! ಅವರು ಕೇಳಿದರು: 'ಕೃಷ್ಣಾ ನೀ ಎಲ್ಲಿಯಾಕೆ?'

'ಸಾಂಗಲಿ ಕೊಲ್ಹಾಪುರದ ಕಡೆಯಾಕೆ. ಸಣ್ಣಾಕೆ ಇದ್ದಾಗ ಕೊಂಕಣದಲ್ಲಿ ಇದ್ದೆ'

'ಇಷ್ಟು ಚಲೋ ಹೇಗೆ ಮಾತಾಡಲಿಕ್ಕೆ ಬರತದೆ ನಿನಗೆ?'

'ಚಿಕ್ಕಂದಿನಲ್ಲಿಯೇ ತಾಯಿ ಹೋಗಿಬಿಟ್ಟಳು. ಅಂದಿನಿಂದ ಸ್ಥಿತಿ ವಂತರ ಮನೆಯಲ್ಲೇ ಬೆಳೆದೀನಿ'

'ನಿನಗೆ ಬರೆಯಲಿಕ್ಕೆ ಓದಲಿಕ್ಕೆ ಬರತದೇನು?'

'ಓಹೋ ಬಹಳ ಪ್ರೀತಿ ಆಕೆ ಅದರ ಮೇಲೆ! ನನ್ನ ಕಡೆಯಿಂದ ಮಾಸಿಕ ಮುಂತಾದ್ದು ಇಸಕೊಂಡು ಹೋಗತಾಳೆ' ಎಂದು ವಿದ್ಯಾಧರ ಹೇಳಿದ.

'ಕೊಂಕಣದೊಳಗೆ ಯಾಕೆ ಬಂದಿ-ಹಾಗಾದರೆ?' ಎಂದು ಬಾಪ್ಪಾ ಕೇಳಿದರು.

'ನನ್ನ ಮುಂಬಯಿಗೆ ಕೊಟ್ಟಿದ್ದರು. ಆದರೆ ಯಜಮಾನರು—'

ಕೃಷ್ಣೆಯು ಮೋರೆಯನ್ನು ತಿರುವಿದಳು. ಬಾಪ್ಪಾ ತಿಳಿದರು— ದುಃಖವನ್ನು ನೆನೆದು ಅವಳ ಕಣ್ಣಲ್ಲಿ ನೀರು ತುಂಬಿದೆಯೆಂದು. ಹೆಚ್ಚಿಗೆ ಕೇಳಿ ಅವಳಿಗೆ ತ್ರಾಸ ಕೊಡುವದೇಕೆ? ಮನೆಮನೆಗೂ ಅದೇ ಪರಿ! ಸುಶಿಕ್ಷಿತರೆನಿಸುವವರು ಸಹ ಒಬ್ಬ ಹೆಂಡತಿ ಜೀವಿಸುತ್ತಿರುವಾಗಲೇ

ಎರಡನೆಯವಳನ್ನು ಮಾಡಿಕೊಳ್ಳುತ್ತಾರೆ. ಇಲ್ಲವೆ ಸೆರೆ ಕುಡಿದು ಹೆಂಡಿರು ಮಕ್ಕಳನ್ನು ಬಡಿಯುತ್ತಾರೆ. ಅಂದಮೇಲೆ ಅಶಿಕ್ಷಿತರಲ್ಲಿ ಹೀಗಾಗುತ್ತಿದ್ದರೆ ಅದರಲ್ಲಿ ಆಶ್ಚರ್ಯವೇನು ?

ವಿದ್ಯಾಧರ ಅಂದ—'ನನ್ನ ಸಮಾಚಾರ ಈಕೆಯದರ ವಿರುದ್ಧವಾಗಿದೆ ನೋಡಿರಿ'

ವತ್ಸಲೆಯು ಚಟ್ಟನೆ ತಿರುಗಿ ನೋಡಿದಳು. ಬಾಪ್ಪಾ ಅವರಿಗೆ ಅವಳ ಕಣ್ಣಲ್ಲಿ ನೀರು ತೋರಲಿಲ್ಲ. ಅವರಿಗನಿಸಿತು—ದುಃಖವು ಬಹಳವಾದರೆ ಸಮುದ್ರವು ಸಹರಾ ಆಗುವದು.

ವಿದ್ಯಾಧರ ಹೇಳತೊಡಗಿದ—'ಇವರ ತಾಯಿಯ ಹಾಗೆ ನನ್ನ ತಾಯಿ ನನ್ನ ಚಿಕ್ಕಂದಿನಲ್ಲಿ ತೀರಿಕೊಳ್ಳಲಿಲ್ಲ. ಆದರೆ ಆಕೆ ಇಷ್ಟು ಸೀಡಕ, ಹಟವಾದಿ ಹಾಗೂ ದುಂದುಗಾರಳಿದ್ದುದರಿಂದ ನನಗೆ ಆಕೆಯ ಸಲಿಗೆಯೆ ಆಗಲಿಲ್ಲ. ಧೊಂಡೂ ಅಂತ ಒಬ್ಬ ಒಕ್ಕಲಗಿತ್ತಿ ಇದ್ದಳು ನಮ್ಮ ಮನೆಯಲ್ಲಿ. ಹಗಲು ರಾತ್ರಿ ನಾ ಆಕೆಯನ್ನು ಅಂಟಿಕೊಂಡಿರತಿದ್ದೆ. ಆಕೆಯದೇ ಬಕ್ಕರಿ ತಗೊಂಡು ತಿನ್ನುವದು, ಹೀಗೆ ನನ್ನ ಚಿಕ್ಕಂದೆಲ್ಲ ಕಳೆಯಿತು. ನಮ್ಮ ತಾಯಿ ತೀರಿಕೊಂಡ ಒಂದು ದಿನ ಮಾತ್ರ ನಾನೇನಾದರೂ ಅತ್ತಿರಬಹುದು! ಆದರೆ ಇಂದಿನ ತನಕ ಧೊಂಡೂನ ನೆನಪು ಆದರೆ ಕ್ಷಣ ಹೊತ್ತು ಹಳಹಳಿಯಾಗತದೆ. ಆಕೆಯ ಆ ಕೌದಿಯ ಕಾವು, ಆ ಬಳ್ಳೊಳ್ಳಿ ಚಟ್ಣಿಯ ನಸು, ಅಂತಃಕರಣದಿಂದ ತುಂಬಿತುಳುಕುತ್ತಿರುವ ಆ ಹಳ್ಳಿಗಾನ ಮಾತು—'

'ಅಂದರೂ ಇಲ್ಲಿ ಬಂದಿಂದ ಕೊಂಕಣಿ ಏನು ತಿಳಿಯಲೊಲ್ಲದು ನಿಮಗೆ' ಎಂದು ವತ್ಸಲೆ ನಡುವೇ ಬಾಯಿಹಾಕಿದಳು.

'ಭಾಷೆಯ ಕಡೆಗೆ ಮೊದಲಿನಿಂದಲೂ ನನ್ನ ಲಕ್ಷ್ಯ ಕಡಿಮೆ. ಹಾಗೆಂದೇ ಕಂಬಾರ ಆಗಿ ಇಲ್ಲಿ ಈ ಗೋಡಂಬಿ ಒಡೆಯುವ ಯಂತ್ರ ಮಾಡಲಿಕ್ಕೆ ಬಂದೀನಿ'

'ಲಗ್ನ ಆಗಿದೆಯೇನು ನಿಮ್ಮದು?' ಎಂದು ಬಾಪ್ಪಾ ತಟ್ಟನೆ ಕೇಳಿದರು.

'ನನ್ನ ತಾಯಿಯ ಅಂದಾದುಂದಿಯಿಂದ ನಾವು ಸ್ವಲ್ಪ ದಿವಸದೊಳಗೇ ಬಡವರಾದೆವು. ಊಟದ ವಾರ ಹಾಗೂ ಸ್ಕಾಲರಶಿಪ್ಪಿನ ಮೇಲೆ ನನ್ನ ಶಿಕ್ಷಣ ಆಯ್ತು. ನನ್ನಂಥ ಸಡೇಸೋಟನಿಗೆ ಯಾರು ಕೊಡತಾರೆ ಹುಡುಗಿನ್ನ? ಈ ಯಂತ್ರ ಸಾಧಿಸಿತೆಂದರೆ ಐದು ಸಾವಿರ ರೂಪಾಯಿ ಕೈಗೆ ಬರತಾವೆ. ಅಲ್ಲಿಂದ ಮನಸಿನತಕ್ಕ ಹುಡುಗಿ ಸಿಕ್ಕರೆ ಮದುವೆ'

'ಮನಸಿನ ತಕ್ಕ ಅಂದರೆ?'

'ದೊಡ್ಡವರ ಪೈಕಿ ಡೌಲಿನ ಗೊಂಬೆ ಬೇಡ ನನಗೆ. ನನ್ನ ಉದ್ಯೋಗ ಕಂಬಾರನದು. ಅಂದಮೇಲೆ ಒಬ್ಬಾಕೆ ಕಂಬಾರಗಿತ್ತಿ—'

ವಿದ್ಯಾಧರನ ಈ ಉತ್ತ್ರಾಸ ವಿನೋದಕ್ಕೆ ಯಾರಿಗೂ ನಗೆಯನ್ನು ತಡೆಯುವದಾಗಲಿಲ್ಲ.

'ಧೋಂಡೂಗೆ ಒಬ್ಬ ಮಗಳಿದ್ದರೆ ಆಕೀನ್ನೇ ಕೊಡಂತ ಕೇಳತಿದ್ದೆ! ಇದ್ದುಬಿದ್ದ ಎಲ್ಲ ಕೆಲಸಾ ಮಾಡುವಂಥ ಹೆಂಡತಿ ಬೇಕು ನನಗೆ. ಅಂಥಾಕೆ ದೊಡ್ಡಮಂದಿಯೊಳಗೆ, ಅದರೊಳಗೆ ಬ್ರಾಹ್ಮಣರೊಳಗೆ— ಉಸುಕಿನ ಅರಣ್ಯದೊಳಗೆ ಸಂಗಮರವರೀ ಕಲ್ಲು ಸಿಕ್ಕರೂ ಸಿಕ್ಕೀತು! ಆದರೆ—'

'ಆದರೆ ಕಲಿತ ಹುಡಿಗೆಯರು ಬೇಕಾದರೆ ದೊಡ್ಡಮಂದಿಯೊಳಗೇ ಸಿಗುವರು'

'ಏನು ಮಾಡುವದು ಆ ಕಲಿಕೆ ತಗೊಂಡು? ತುಟಿಯ ಬಣ್ಣ ಹೋದೀತೆಂದು ಮಕ್ಕಳಿಗೆ ಮುದ್ದುಕೊಡಲಾರದ ತಾಯಂದಿರು, ಕೊಂಕಣವು ತಮ್ಮ ಮನಸಿಗೆ ಬರುವದಿಲ್ಲೆಂದು ಗಂಡಂದಿರಿಗೆ ಅಲ್ಲಿಯ ನೌಕರಿ ಬಿಡಿಸಿ ಕೆಲಸವಿಲ್ಲದಂತೆ ಮಾಡುವ ಹೆಂಡಿರು, ಲಗ್ನಮಾಡಿಕೊಳ್ಳುವದಿಲ್ಲೆಂದು ಜಂಬಕೊಚ್ಚಿ ಶೃಂಗಾರಿಕ ಚಿತ್ರಪಟ ಹಾಗೂ ಕಾದಂಬರಿ ಇವುಗಳಲ್ಲಿ ಮುಳುಗಿ ಮುಳುಗಿ ಏಳುವ ಹುಡುಗಿಯರು— ಇಂಥಾ ಕಲ್ತ ಹೆಂಗಸರನ್ನು ನೋಡಿ ನನ್ನ ಮನಸು ಹೇಸಿ ಹೋಗಿದೆ.'

'ನೀವೂ ನನ್ನಂಥ ಗಾಂಧಿಭಕ್ತನ ಹಾಗೆ ಮಾತಾಡಲಿಕ್ಕೆ ಹತ್ತಿಬಿಟ್ಟಿರಲ್ಲ!'

ಸಮುದ್ರ ಉಕ್ಕೇರುವ ಹೊತ್ತಿಗೆ ಸ್ವಲ್ಪ ಗಾಯವಾದರೂ ಬಹಳ ರಕ್ತ ಹರಿಯುವದೆಂದು ಸಮುದ್ರದ ದಂಡೆಯಲ್ಲಿರುವ ಜನರು ತಿಳಿಯುತ್ತಾರೆ. ಸಾಯಂಕಾಲದ ಪ್ರಸನ್ನ ವೇಳೆ, ಸಹಜವಾಗಿ ಯಾರ ಮುಂದೆಯೂ ಬಿಚ್ಚಿರದ ಅಂತಃಕರಣ, ಬಾಪ್ಪಾ ವತ್ಸಲೆಯರಂಥ ಮನ ಸೊಪ್ಪುವ ಶ್ರೋತೃಗಳು, ಈ ತ್ರಿವೇಣೀಸಂಗಮವಾದ್ದರಿಂದ ವಿದ್ಯಾ ಧರನು ಪೂರಾ ಮನಬಿಚ್ಚಿ ಮಾತಾಡಹತ್ತಿದನು.

'ನನ್ನ ಅನುಭವವೇ ಹಾಗಿದೆ ಬಾಪ್ಪಾ. ಕಲಿಯುವದು ಮುಗಿದ ಕೂಡಲೇ ನಮ್ಮ ಜಾತಿ ಯಾವನೋ ಒಬ್ಬ ದೊಡ್ಡ ಮನುಷ್ಯ ಮುನ್ನೂರು ರೂಪಾಯಿಗಳ ಒಂದು ನೌಕರಿ ಮತ್ತು ಒಬ್ಬ ಹುಡುಗಿ ತಗೊಂಡು ನನ್ನ ಕಡೆ ಬಂದ, ಆದರೆ ನೌಕರಿ ಮಾಡುವದೇ ನನಗೆ ಬೇಕಾಗಿದ್ದಿಲ್ಲ.'

'ಯಾಕೆ?'

'ಕಾರಕೂನ ಆಗುವದು ಬೇಕಾಗಿಲ್ಲ ನನಗೆ, ನನ್ನ ಮನಸಿನಲ್ಲಿಯ ಇಚ್ಛೆಯೆಂದರೆ ಏನಾದರೂ ಶೋಧಮಾಡಬೇಕು, ಹೆಸರಾಗಬೇಕು. ಆ ನಮ್ಮ ಮಾವಂದಿರ ಮೋಜು ಹೇಳುವದು ಹಾಗೇ ಉಳಿಯಿತಲ್ಲ, ಆ ನೌಕರಿಯ ಅಮೃತದ ಕೂಡ ಅವನು ಇಂಥಾ ವಿಷ ತಂದಿದ್ದು—'

'ಕಪ್ಪು ಇದ್ದಳೆಂದು ಕಾಣತದೆ ಹುಡುಗಿ?'

'ಬಣ್ಣಕ್ಕೆ ನಾ ಅಷ್ಟು ಬೆಲೆ ಕೊಡುವದಿಲ್ಲ! ಸುಣ್ಣ ಬೇಕಾದಷ್ಟು ಬೆಳ್ಳಗಿದ್ದರೇನು, ಕಸ್ತೂರಿಯ ಬೆಲೆ ಅದಕ್ಕೆ ಬಂದೀತೇನು?'

' ವಿದ್ಯಾಧರನು ವತ್ಸಲೆಯ ಕಡೆಗೆ ನೋಡಿ ಸ್ವಲ್ಪ ನಕ್ಕ. ಅವಳ ಮೋರೆಯ ಮೇಲೆಯೂ ಅವಳರಿಯದೆಯೆ ನಸುನಗೆಯು ಮೂಡಿತು.

'ಅಲ್ಲಿಂದ? ಏನು ಕಡಿಮೆಯಾಯ್ತು?'

'ಚಲೋ ಕುಂಟ ಇದ್ದಳಲ್ಲ ಹುಡುಗಿ. ನೌಕರಿಯ ಆಧಾರದಿಂದ ನಡೆಯಬಹುದೆಂದು ಅನಿಸಿತ್ತು ಕಾಣತದೆ ಅವರಪ್ಪಗೆ'

ಬಾಪ್ಪಾ ನಗು-ನಗುತ್ತ ಕೇಳಿದರು—'ನೌಕರಿ ಎಂದೂ ಮಾಡ ಬಾರದೆಂದು ನಿಮ್ಮ ಸಂಕಲ್ಪ ಅದೆ ಏನು?'

'ಹೌದೇ ಹೌದು. ಹೊಸದೇನಾದರೂ ಶೋಧ ಮಾಡಬೇಕು, ದೇಶದ ಕೀರ್ತಿಗೊಂದಿಷ್ಟು ಭರತಿ ಹಾಕಬೇಕು—'

'ಶ್ರೀಮಂತರ ಕಿಶೆಯೊಳಗೆ ಇಷ್ಟು—'

'ಬಡವರಿಗೂ ಆಗತದೆ ಶೋಧದ ಉಪಯೋಗ'

'ಕೆಲಸಿಲ್ಲದೆ ಹೊಟ್ಟೆತುಂಬಿಕೊಳ್ಳುವ ಯಂತ್ರ ತೆಗೆದರೆ ಆದೀತು ಉಪಯೋಗ.'

'ವಿದ್ಯಾಧರ ಬೆಚ್ಚಿದ. ಆದರೆ ಬಾಪ್ಪಾ ಅವರ ಮೇಲೆ ತನ್ನ ವರ್ಚಸ್ಸು ಕೆಡುವಬೇಕೆಂದು ಅವನಂದ—'ನೀವೆಷ್ಟಾದರೂ ಗಾಂಧಿ ಭಕ್ತರು. ಕೈಯೊಳಗೆ ಗಡಿಯಾರ ಕಟ್ಟುವದಕ್ಕಿಂತ ಕೊರಳಲ್ಲಿ ಗಳಿಗೆ ಒಟ್ಟಲ ಕಟ್ಟಿಕೊಳ್ಳಬೇಕೆನ್ನುವತನಕ ಸರತಿ—ನಿಮ್ಮದು'

ಬಾಪ್ಪಾ ಅವರಿಗೆ ಅವನ ಈ ಉಪಹಾಸದಿಂದ ಸಿಟ್ಟು ಬರಲಿಲ್ಲ. ಬಡತನದಲ್ಲಿ ಶಿಕ್ಷಣ ಸಂಪಾದಿಸಿಯೂ ನೌಕರಿಯ ಸುಖಕ್ಕೆ ಅವನು ಮೆಚ್ಚಲಿಲ್ಲೆಂಬದನ್ನು ನೋಡಿ ಅವರ ಮನಸಿನಲ್ಲಿ ಅವನ ಬಗ್ಗೆ ಕೌತುಕ ಉತ್ಪನ್ನವಾಯಿತು. ಕಳೆದ ಹತ್ತು ವರ್ಷ ಸಾರ್ವಜನಿಕ ಕಾರ್ಯಗಳಲ್ಲಿಯ ತಮ್ಮ ಅನುಭವವು ಅವರ ಕಣ್ಣು ಮುಂದೆ ನಿಂತಿತು. ಮಹಾರಾಷ್ಟ್ರದಲ್ಲಿ ದುಡ್ಡಿಲ್ಲದಿದ್ದರೂ ಬುದ್ಧಿಯಿದೆ. ಆದರೆ ಈ ಬುದ್ಧಿಗೆ ಯೋಗ್ಯ ದಾರಿಯಿಲ್ಲ. ರಾಷ್ಟ್ರದ ತಾರುಣ್ಯವು ಹೇಗೆ ವಸಂತ ಋತುವಿನ ಸೂರ್ಯಪ್ರಕಾಶವಂತಿರಬೇಕು! ಆದರೆ ಬಾಪ್ಪಾ ಅವರ ಅನುಭವವು ತೀರ ವಿರುದ್ಧವಾಗಿತ್ತು. ಬಡತನದಲ್ಲಿ ಶಿಕ್ಷಣ ಪಡೆದವರು, ಗರ್ಭಶ್ರೀಮಂತರು, ಕುಲೀನರು ಆದ ಅನೇಕ ತರುಣರೊಡನೆ ಕೂಡಿರುವ ಪ್ರಸಂಗಗಳು ಅವರಿಗೆ ಬಂದಿದ್ದವು. ಆದರೆ ಅವರಲ್ಲಿ ಬಹುಜನರ ದೃಷ್ಟಿ ಸಂಕುಚಿತವಾದದ್ದು. ದುಡ್ಡು ದೊರಕಿಸಿದರೆ, ಇದ್ದ ಊರಲ್ಲಿಯೇ ಮುನಸಿಪಾಲ್ಟಿಯಲ್ಲಿ ಆರಿಸಿ ಬಂದರೆ, ಹೊಲಮನೆ ಕೊಂಡರೆ, ಹೆಂಡಿರುಮಕ್ಕಳ ಮೈಮೇಲೆ ವಸ್ತ್ರಒಡವೆಗಳನ್ನು ಹೇರಿದರೆ, ಬಹಳ ಹೆಚ್ಚೆಂದರೆ ವರ್ತಮಾನ ಪತ್ರದಲ್ಲಿ ಹೆಸರು ಬಂದರೆ, ಅವರ ಕರ್ತೃತ್ವದ ಸೀಮೆಯಾಯಿತು!' ಉಚ್ಚ ಮಹತ್ವಾಕಾಂಕ್ಷೆ, ಉದಾತ್ತಧ್ಯೇಯ, ದಾರ್ಢ್ಯ ಜನರ ಮನವೊಲಿಸುವ

ಸ್ವಾರ್ಥತ್ಯಾಗ, ಒಂದೆಂದರೆ ಒಂದೂ ಇಂಥ ಸದ್ಗುಣವು ಈ ನೂರಾರು ತರುಣರಲ್ಲಿ ಅವರ ದೃಷ್ಟಿಗೆ ಬಿದ್ದಿರಲಿಲ್ಲ. ಈ ತರುಣರ ಜಗವೆಂದರೆ ಅವರ ಊರು. ಆ ಜಗದಲ್ಲಿಯ ಮಹತ್ತ್ವದ ಭಾಗವೆಂದರೆ ಅವರ ಉದ್ಯೋಗ, ಅವರ ಕುಟುಂಬ. ದೇಹಕ್ಕೆ ಶರೆಯ ಉಪಯೋಗವೆಷ್ಟೋ ಅಷ್ಟು ಅವರ ಮನಸಿಗೆ ವರ್ತಮಾನಪತ್ರದ ಉಪಯೋಗ. ಕೇವಲ ಬಹು ದಿವಸದ ಚಟವೆಂದು ಅದನ್ನು ಓದುವದು. ವಿಚಾರಗಳ ಮೇಲಾಗಲಿ ಭಾವನೆಗಳ ಮೇಲಾಗಲಿ ಆ ವಾಚನದ ಪರಿಣಾಮವು ಎಳ್ಳಷ್ಟೂ ಆಗುವ ಹಾಗಿಲ್ಲ. ಎಲ್ಲರೂ ಪ್ರವಾಹಪತಿತರೇ! ಕೈಕಾಲು ಅಲುಗಾಡಿಸಲಿಕ್ಕೆ ಯಾರಿಗೂ ಬೇಡ. ಎಲ್ಲರೂ ಕುರುಡರು! ಕಣ್ಣು ತೆರೆದು ನೋಡುವದು ಯಾರಿಗೂ ಬೇಡ. ಇಂಥ ನಾಚಿಕೆಗೇಡಿ ತರುಣರಿಗಿಂತ ಪ್ರವಾಹದ ವಿರುದ್ಧ ಈಸುವ ಧೈರ್ಯವುಳ್ಳವನೂ, ಕಣ್ಣು ತೆರೆದು ಸುತ್ತಲೂ ನೋಡ ಬಲ್ಲವನೂ ಆದ ವಿದ್ಯಾಧರನು ಅವರಿಗೆ ಎಷ್ಟೋ ಬೇಕೆನಿಸಿತು. ಅವನು ಮಾಡಿದ ಉಪಹಾಸವು ಕೂಡ ಒಂದು ದೃಷ್ಟಿಯಿಂದ ಅವನ ಕರ್ತೃತ್ವದ ದ್ಯೋತಕವೇ ಆಗಿತ್ತು.

ಸ್ವಲ್ಪ ವೇಳೆ ಸುಮ್ಮನಿದ್ದು ಬಾಪ್ಪಾ ನುಡಿದರು—'ವಿದ್ಯಾಧರ, ನಾನೇನು ನಿಮ್ಮ ಯಂತ್ರಕ್ಕೆ ವಿರುದ್ಧ ಇಲ್ಲ.'

'ಅಲ್ಲಿಂದ?'

'ಮನುಷ್ಯರನ್ನು ಯಂತ್ರಗಳನ್ನಾಗಿ ಮಾಡುವವರೂ ಈ ಜೀವಂತ ಯಂತ್ರಗಳಿಗೆ ಹೊಟ್ಟೆತುಂಬ ಆಹಾರವನ್ನೂ ಕೊಡದೆ ಅವನ್ನು ನಡೆಸ ಲಿಕ್ಕೆ ಇಚ್ಛಿಸುವವರೂ—'

ಬಾಪ್ಪಾ ನಡುವೇ ತಡೆದರು. ಅವರು ಖಿನ್ನದೃಷ್ಟಿಯಿಂದ ಮೇಲೆ ನೋಡಿದರು. ಅವರ ಮಾತಿಗಿಂತಲೂ ಅವರ ಈ ನೋಟದ ಪರಿಣಾಮವು ವತ್ಸಲೆ-ವಿದ್ಯಾಧರರ ಮೇಲೆ ಹೆಚ್ಚಾಯಿತು. ಕಾಯದೇಭಂಗದ ಚಳವಳಿ ಯಲ್ಲಿ ಆವರ ಕಳಕಳಿಯ ಭಾಷಣಗಳಿಂದ ಇಡೀ ರತ್ನಾಗಿರೀ ಜಿಲ್ಹೆಯೇ ಹೇಗೆ ಅಲ್ಲೋಲ-ಕಲ್ಲೋಲವಾಗಿದ್ದಿತೆಂಬದನ್ನು ವಿದ್ಯಾಧರನು ಸುಲೋ ಚನೆಯ ಬಾಯಿಂದ ಮೊದಲೇ ಕೇಳಿದ್ದ. ಅವನು ನೋಡಿದ—ಬಾಪ್ಪಾ

ಅವರ ಕಣ್ಣುಗಳಲ್ಲಿ ಒಂದು ತರದ ತೇಜವು ತೋರುತ್ತಿತ್ತು. ಅವರು ಮತ್ತೆ ಮಾತಾಡಹತ್ತಿದರು. ಯಾವಾಗಲೂ ಮೃದುವಾದ ಅವರ ಸ್ವರವು ಸಹ ಈಗ ಸ್ವಲ್ಪ ಕಠೋರವಾಗಿದೆಯೆಂದು ವಿದ್ಯಾಧರನಿಗೆ ಅನಿಸಿತು.

'ವಿದ್ಯಾಧರ, ನಾಳೆ ನೀವು ಗೋಡಂಬಿಯಂತ್ರ ಹುಡುಕಿ ತೆಗೆಯು ವಿರಿ. ದಾದಾ ನಿಮಗೆ ಐದು ಬಿಟ್ಟು ಹತ್ತು ಸಾವಿರಾದರೂ ಕೊಟ್ಟಾರು. ನಿಮ್ಮ ಕೀರ್ತಿ ಅಮೇರಿಕದವರೆಗೂ ಮುಟ್ಟೀತು. ನಮ್ಮ ಸೂಲೋಚನೆ ಯಂಥ ಒಬ್ಬ ಚಲೋ ಹುಡುಗಿ ನಿಮಗೆ ಮಾಲೆಯಾದರೂ ಹಾಕಿಯಾಳು. ಮುಂಬಯಿಯೊಳಗಿದ್ದು ಪ್ರತಿದಿವಸ ಮೋಟಾರದಲ್ಲಿ ಜುಹೂದ ಕಡೆ ತಿರುಗಾಡಲಿಕ್ಕೆ ಹೋಗಬಹುದು. ಪರಂತು ಅದೇ ಹೊತ್ತಿಗೆ ಪ್ರತಿ ದಿವಸ ಇಲ್ಲೇನು ನಡೆಯುವದು?'

ಕಡೆಯ ಶಬ್ದಗಳನ್ನುಚ್ಚರಿಸುವಾಗ ಬಾಪ್ಪಾ ಅವರ ಸ್ವರದಲ್ಲಿ ವಿಚಿತ್ರ ಕಂಪವುಂಟಾಗಿತ್ತು. ವಿದ್ಯಾಧರನಿಗೆನಿಸಿತು–ಮರಣದ ಅಮಂಗಲ ವಾರ್ತೆಯನ್ನು ಹೇಳುವವನ ಸ್ವರವು ಇದೇ ತರದ ಕಂಪವನ್ನು ಹೊಂದುವುದೆಂದು.

'ವಿದ್ಯಾಧರ, ಇಂದು ಐನೂರು ಜನರು, ಹೇಗೇ ಆಗಲಿ, ಇಲ್ಲಿ ತಮ್ಮ ಹೊಟ್ಟೆ ತುಂಬಿಕೊಂಡು ಇದ್ದಾರೆ. ನಾಳೆ ನಿಮ್ಮ ಯಂತ್ರ ಇವರ ಹೊಟ್ಟೆಯ ಮೇಲೆ ಕಾಲು ಕೊಡುವದು. ಯಂತ್ರವು ಬಂದ ಕೂಡಲೆ ಐವತ್ತೇ ಮಂದಿ ಈಗ ಐನೂರು ಮಂದಿ ಮಾಡುವ ಕೆಲಸವನ್ನು ಮಾಡ ತಾರೆ. ಉಳಿದ ನಿರುದ್ಯೋಗಿಗಳಾದ ನಾಲ್ಕುನೂರೈವತ್ತು ಮಂದಿ ಏನು ಮಾಡಬೇಕು?

'ಹೊಟ್ಟೆಯ ಪಿಂಡಗಳನ್ನು ಕಲ್ಲಿನ ಹಾಗೆ ಕೊರಳೊಳಗೆ ಕಟ್ಟಿ ಕೊಂಡು ಈ ಕೆರೆಯೊಳಗೆ ಜೀವಕೊಡಬೇಕೋ, ಏನೀ ಗುಡ್ಡದಮೇಲಿನ ಕಲ್ಲು ತಿಂದಿರಬೇಕೋ? ಜುಹೂದ ಉಸುಕಿನಲ್ಲಿ ನೀವು ನಿಮ್ಮ ಮಕ್ಕಳ ಕಡೆಗೆ ಕೌತುಕದಿಂದ ನೋಡುತ್ತ ಕೂಡಬಹುದು. ಆದರೆ ಅದೇ ಹೊತ್ತಿಗೆ ಇಲ್ಲಿಯ ಕೂಲಿಕಾರರ ಗುಡಿಸಲುಗಳಲ್ಲಿ ಅವರ ಮಕ್ಕಳು

ಹಸಿವೆಯಿಂದ ರಂಬಾಟ ಮಾಡಬಹುದು. ನೀವು ಸಂಜೆಯ ಕೆಂಪನ್ನು ನಿಮ್ಮ ಹೆಂಡತಿಯ ಗಲ್ಲದ ಗುಲಾಬಿಗೆ ಹೋಲಿಸಿ ನಗಬಹುದು. ಆದೇ ಈ ಕಡೆ ಕುಡುಕ ಗಂಡನು ದುಡ್ಡಿಲ್ಲದವಳೆಂದು ಹೆಂಡತಿಯ ಕಪಾಳವನ್ನು ಕೆಂಪುಮಾಡುವನು. ಸಂಜೆಯ ತಿರುಗಾಟದಿಂದ ನಿಮಗೆ ಗಾಢವಾದ ನಿದ್ದೆ ಹತ್ತಬಹುದು. ಇಲ್ಲಿ ಬಡವರು ಮರುದಿನದ ಚಿಂತೆಯಿಂದ ಬೆಳ ತನಕ ಈ ಮಗ್ಗಲಿಂದ ಆ ಮಗ್ಗಲಿಗೆ ಹೊರಳಾಡುವರು. ಈ ಪಾಪ— ಇದಕೆಲ್ಲಾ ಪಾಪ ಅಂತೇ ಅಂತೀನಿ ನಾನು—ಈ ಪಾಪದ ಕೊಪ್ಪರಿಗೆ ಯಾರ ತಲೆಯನ್ನು ಒಡೆಯುವದು?'

ಎದುರಿಗೆ ಕೆಂಪಾದ ಸೂರ್ಯನೂ ಇದೇ ಪ್ರಶ್ನೆಯನ್ನು ಕೇಳು ತ್ತಿರುವಂತೆ ವಿದ್ಯಾಧರನಿಗೆ ಭಾಸವಾಯಿತು. ಅವನು ಮೆಲ್ಲಗೆ ಅಂದ—

'ಇದಕ್ಕೇನು ಉಪಾಯ?'

'ಉಪಾಯ? ಎರಡು ಧ್ರುವಗಳ ನಡುವಿನ ಅಂತರ ಕಡಿಮೆ ಮಾಡುವದು'

ಬಾಪ್ಪಾ ಅವರ ಶಬ್ದಗಳನ್ನು ಕೇಳಿ ವತ್ಸಲೆಯು ಬೆಚ್ಚಿದಳು. ಅದು ಅವರ ಲಕ್ಷ್ಯಕ್ಕೆ ಒಂದು ಕೇಳಿದರು: 'ಹುಳ-ಹುಪ್ಪಡಿ ಎನಾದರೂ ಅದೆ ಏನು?'

ಇಲ್ಲವೆಂದು ಅವಳು ತಲೆಯಲ್ಲಾಡಿಸಿದಳು.

'ವಿದ್ಯಾಧರ, ಇಂಗ್ರಜೀ ಸರಕಾರದವರು ಕಪ್ಪು ಬಿಳೀ ಜನರ ನಡುವೆ ಭೇದಮಾಡುವರೆಂದು ನಾವೆಲ್ಲ ಸಿಟ್ಟಿಗೇಳತೀವಿ. ಆದರೆ ನಮ್ಮ 'ಬಿಳಿಯಂಗಿ' ಯಜಮಾನರೇನು ಕಡಿಮೆ ಇದ್ದಾರೆ? ಮೊದಲು ಹೇಗೆ ಕಲಿತವರೆಲ್ಲಾ ಸಾಹೇಬರು ಆಗಬೇಕಂತಿದ್ರರೋ ಹಾಗೆ ಈಗ ಎಲ್ಲರೂ 'ಬಿಳಿಯಂಗಿ'ಯವರಾಗಬೇಕಂತಾರೆ. ಪ್ರತಿಯೊಬ್ಬನಿಗೆ ಗೌರವರ್ಣ ಬೇಕು, 'ಬಿಳಿಯಂಗಿ'ಯ ದೊಡ್ಡಸ್ತಿಕೆ ಬೇಕು—'

'ಮನುಷ್ಯ ಸ್ವಭಾವವೇ—'

'ಛೆ! ಅದಕ್ಕೆ ಮತ್ತೊಂದು ಕಾರಣ ಅದೆ. ಕರೀ ಮೋರೆಯ

ವಿಷ್ಣುವಿಗೆ ಲಕ್ಷ್ಮಿಯು ಮಾಲೆ ಹಾಕಿದ್ದು ಹಿಂದಿನ ಕಾಲದೊಳಗೆ. ಈಗ ಲಕ್ಷ್ಮಿ ಬರೀ ಬಿಳಿಯಂಗಿಯವರಿಗೆ ಮಾಲೆ ಹಾಕತಾಳೆ'

ಬಾಪ್ಪಾ ಅವರ ಈ ವ್ಯಾಖ್ಯಾನದಂಥ ಭಾಷಣವು ಇನ್ನೂ ಉದ್ದವಾಗುತ್ತಿತ್ತು. ಆದರೆ ಗುಡ್ಡದ ಮೇಲೆ ಹತ್ತಲಿಕ್ಕೆ ಬಂದ ಗದ್ದೆಯ ದನಗಳು ಮನೆಯ ಕಡೆಗೆ ತಿರುಗಿ ಹೋಗಹತ್ತಿದ್ದವು. ಅವುಗಳಲ್ಲಿ ಒಂದು ಕರೀ ಆಡನ್ನು ವತ್ಸಲೆಯು ಕೈ ಮುಂದೆ ಮಾಡಿ ಕರೆದಳು. ಅದು ಅಂಜದೆ ಅವಳ ಹತ್ತಿರ ಬಂತು. ವತ್ಸಲೆಯು ಅದರ ಮೈಮೇಲೆ ಕೈಯಾಡಿಸಹತ್ತಲು ಅದು ಅವಳ ಕೈಯನ್ನು ನೆಕ್ಕಲಿಕ್ಕೆ ಮೋರೆಯನ್ನು ತಿರುವಿತು. ಬಾಪ್ಪಾ ಕೈ ಮುಂದೆ ಮಾಡಲು ಅದು ದಿಟ್ಟತನದಿಂದ ಅವರ ಕಡೆಗೂ ಹೋಯಿತು. ತಾನೂ ಅದನ್ನು ಕರೆಯಬೇಕೆಂದು ವಿದ್ಯಾಧರನಿಗೆನಿಸಿತು. ಅವನೂ ಕೈ ಮುಂದೆ ಮಾಡಿದ. ಆದರೆ ಆ ಆಡು ಅವನ ಹತ್ತಿರ ಹೋಗದೆ ಅಂಜಿ ಹಿಂದೆ ಸರಿದು ವತ್ಸಲೆಗೆ ಹೊಂದಿಕೊಂಡು ನಿಂತಿತು.

ಬಾಪ್ಪಾ ನಗುನಗುತ್ತ ಅಂದರು—'ನೋಡಿದಿರಾ ವಿದ್ಯಾಧರ, ಈ ಮೂಕಪ್ರಾಣಿ ಸುದ್ದಾ ನನ್ನ ಮಾತೇ ಖರೇ ಅಂತದೆ'

'ನಾ ಏನ ಅದರ ಗುರುತಿನವ ಅಲ್ಲ'

'ನನ್ನದಾದರೂ ಎಲ್ಲಿ ಗುರುತಿದೆ? ಕೃಷ್ಣಾ ಅದಕ್ಕೆ ತನ್ನಾಕೆ ಅನಿಸಿದಳು. ನಾನು ಹೊರಗಿನವ ಅನಿಸಲಿಲ್ಲ. ನೀವು ಮಾತ್ರ—'

'ಹೀಗೆಕೆ ಆಗಬೇಕು?'

'ನಿಮ್ಮ ಅರಿವೆ ನೋಡಿತದು! ಬಿಳಿಯಂಗಿಯವರು—'

ತಾನು ಬಹಳ ಹೊತ್ತು ಕುಳಿತೆನೆಂಬದೂ ಕಾಶಿಯು ತನಗೆ ಆಡಿಕೊಳ್ಳದೆ ಇರುವದಿಲ್ಲೆಂಬದೂ ವತ್ಸಲೆಯ ಲಕ್ಷ್ಯಕ್ಕೆ ಬಂತು. ಅವಳು ಚಟ್ಟನೆ ಎದ್ದು ಆ ಭಾರವನ್ನು ಎತ್ತಹತ್ತಿದಳು.

ಬಾಪ್ಪಾ ಅಂದರು: 'ನಡೆಯಿರಿ ವಿದ್ಯಾಧರ, ಈಕೆಯ ಸಂಗಡವೇ ಹೋಗೋಣ. ನನಗೂ ಕಾಶಿಯ ಭೆಟ್ಟಿ ಆಗಬೇಕಾಗಿದೆ'

'ನಿಮ್ಮದೆಲ್ಲೀ ಗುರುತು?

'ಮೂವತ್ತು ವರ್ಷದ ಹಿಂದಿನದು. ನೆರೇದ ದೆಸೆಯಿಂದ ತೆಂಗಿನ

ಗಿಡ ಕೊಡಬಾರದಂತ ಚಳವಳಿ ಮಾಡಲಿಕ್ಕೆ ನಾ ಇಲ್ಲಿ ಬಂದಿದ್ದೆ. ಮೊದ ಮೊದಲು ಯಾರೂ ತಯಾರ ಆಗಲಿಲ್ಲ. ಅಲ್ಲಿಂದ ಈ ಕಾಶಿ ಹೇಳಿಕೊಟ್ಟಳು ಗುರುಮಂತ್ರ, ದೇವಿ ಹೇಳಿದರ ಕೇಳತಾರಂತ. ಆಕೆಯೇ ಮಾಡಿದಳು ಎಲ್ಲಾ ಪ್ರಯತ್ನ. ದೇವಿ ಆ ವರ್ಷ ಸೆರೆಗಾಗಿ ಗಿಡ ಕೊಡಬಾರದಂತ ಹೇಳ್ಯಾಳ ಅಂತ—'

'ವಾ! ಮದ್ಯಪಾನ ನಿಷೇಧಕ ಮಂಡಳಿಯ ಅಧ್ಯಕ್ಷಳಾಗು ವಷ್ಟು ಯೋಗ್ಯತೆ ಅದೆ ಅನಬಾರದೆ ಕಾಶಿಯದೂ!'

'ಸೆರೇ ಅಂದರೆ ಕಾಲಿನಿಂದ ತಲೆತನಕ ಉರಿತಾಳೆ. ಆಕೆಯ ಗಂಡ ಮತ್ತು ನಮ್ಮ ದಾದಾಸಾಹೇಬರ ತಂದೆ ಅಂದರೆ ಸುಲೂನ ಅಜ್ಜ ಇಬ್ಬರೂ ಒಂದೇ ವಯಸ್ಸಿನವರು. ಒಂದೇ ಅಂಗಡಿಯೊಳಗೆ ತೊಡೆಯ ಮೇಲೆ ತೊಡೆ ಹಾಕಿಕೊಂಡು ಕೂತು ಸೆರೆಕುಡಿಯುವವರೆನ್ನಿರಿ. ಸೆರೆಯ ಅಮಲಿನಲ್ಲಿ ಅವರಿಬ್ಬರೂ ಕೂಡಿ ಒಬ್ಬ ಹೆಣ್ಣುಮಗಳ ಮನೆಗೆ ಉರಿ ಹಚ್ಚಿದರು'

'ಉರಿ?'

'ಹೌದು. ಆದರೆ ಆ ಉರಿಯೊಳಗಿಂದ ಕಾಶಿಯ ಗಂಡ ಪೂರಾ ಸುಟ್ಟುಕೊಂಡೇ ಹೊರಬಿದ್ದ. ಎಂಟು ಹತ್ತು ವರ್ಷ ಜೇಲಿನೊಳಗೆ ಕಳೆಯಬೇಕಾಯಿತು. ಹೊರಗೆ ಬಂದಿಂದ ಯಾರೂ ಬಾಗಿಲ ಮುಂದೆ ನಿಂದರಗೊಡಲಿಲ್ಲ. ಮುಗಿಯಿತು. ತುಡುಗು ಮಾಡಲಿಕ್ಕೆ ಹತ್ತಿದ. ಜೇಲಿಗೆ ಯಾತ್ರಾ ಮಾಡುತ್ತಲೇ ಸತ್ತುಹೋದ. ಕಾಶಿ ಬೆಳಗಾಂವಿಗೆ ಹೋಗಿ ಇಲ್ಲಿಯವರದೇ ಯಾರದೋ ಒಂದು ಚಹಾದ ಅಂಗಡಿಯೊಳಗೆ ಕೆಲಸ ಮಾಡಿಕೊಂಡಿರಲಿಕ್ಕೆ ಹತ್ತಿದಳು—'

'ದಾದಾಸಾಹೇಬರ ತಂದೆಗೇನು ಶಿಕ್ಷೆ ಆಯಿತು?'

'ಅವರಿಗೆಲ್ಲೀ ಶಿಕ್ಷೆ? ಬಿಳಿಯಂಗಿವರು! ಶ್ರೀಮಂತರು! ಬೆಂಕಿ ಹತ್ತಿದಾಗ ಅವರು ಮಾಳವಣದೊಳಗೆ ಇದ್ದರಂತೆ! ದೊಡ್ಡ ದೊಡ್ಡವರ ಸಾಕ್ಷಿ ಆದವು.'

ಮುಂದೆ ಬಾಪ್ಪಾ, ನಡುವೆ ವಿದ್ಯಾಧರ, ಹಿಂದೆ ವತ್ಸಲಾ ಹೀಗೆ

ಸಾಲಾಗಿ ಗುಡ್ಡವನ್ನಿಳಿಯಹತ್ತಿದರು. ಮೇಲೆ ಚೆನ್ನಾಗಿ ಬೆಳಕು ಇದ್ದದ ರಿಂದಲೇ ಇವರೆಲ್ಲರೂ ಇಷ್ಟು ಹೊತ್ತು ಅಲ್ಲಿ ಕುಳಿತಿದ್ದರು. ಆದರೆ ಕೆಳ ಕೆಳಗೆ ಒಂದಂತೆ ಅವರಿಗೆ ಕಾಲಲ್ಲಿ ಹಾದಿ ಕೂಡ ಕಾಣದಂತಾಯಿತು. ವಿದ್ಯಾಧರ-ವತ್ಸಲೆಯರಿಗೆ ಅದೇ ಮಾತಾಡಿದ್ದು ನೆನಪಾಯಿತು. ಮೇಲೆ ಬೆಳಕು ಕೆಳಗೆ ಕತ್ತಲೆ! ಬಾಪ್ಪಾ ವರ್ಣಿಸಿದ ಸಮಾಜಸ್ಥಿತಿಯ ಚಿತ್ರವಿದೇ ಅಲ್ಲವೆ?

ವಿದ್ಯಾಧರನ ಮನದಲ್ಲಿ ಬಂದಿತು-ಈ ಕತ್ತಲೆಯಲ್ಲಿ ತಾನು ಎಡವಿ ಬಿದ್ದು ತನಗೆ ಏನಾದರೂ ಹುಳಹುಪ್ಪಡಿ ಕಚ್ಚಿದರೆ, ಗುಡ್ಡದ ಮೇಲೆ ಮುಳುಗುವ ಸೂರ್ಯನನ್ನೂ ಮೂಡುವ ಚಂದ್ರನನ್ನೂ ನೋಡುತ್ತ ಕುಳಿತವರಿಗೆ ತನ್ನ ಸ್ಥಿತಿಯ ಅರಿವಾಗುವದೆಂತು? ವತ್ಸಲೆಗೆನಿಸಿತು-ಮನು ಷ್ಯರು ಯಾವಾಗಲೂ ಸೃಷ್ಟಿಗೆ ವಿರುದ್ಧವಾಗಿಯೇ ಹೋಗುವರೆಂದು. ಬೆಳ್ಳನ್ನ ಹಗಲು ಕೆಲಸ ಮಾಡುತ್ತದೆ. ಕರೇ ರಾತ್ರಿ ವಿಶ್ರಾಂತಿ ಪಡೆಯು ತ್ತದೆ. ಆದರೆ ಸಮಾಜದಲ್ಲಿಯ ಬಿಳಿಯಂಗಿವರು? ಇಳಿಯುತ್ತ ಇಳಿಯುತ್ತ ಆಕಟ್ಟಿಗೆಯ ಹೊರೆಯು ಅವಳಿಗೆ ಭಾರವೆನಿಸಹತ್ತಿತು. ಅವಳು ತನ್ನಷ್ಟಕ್ಕೆ ನಕ್ಕಳು. ಅವಳ ಕಿವಿಯಲ್ಲಿ ಯಾರು ಹೇಳಿದರೇನೋ—ಇನ್ನೂ ನಿನ್ನ ರಕ್ತದಲ್ಲಿ ಬಿಳಿಯಂಗಿಯುವರ ಗುಣವಿದೆ. ಈ ಹೊರೆ ನಿನಗೆ ಭಾರವೆನಿಸಿತು. ಆದರೆ ನಾಳೆಯಿಂದ ಇಲ್ಲಿಯ ನೂರಾರು ಜನ ಹೆಂಗಸರಿಗೆ ತಮ್ಮ ಜೀವಗಳು ಇದಕ್ಕೂ ಭಾರವೆನಿಸುವವಲ್ಲ! ಅದಕ್ಕೇನುಪಾಯ?

ವತ್ಸಲೆಯು ಹೊರೆಯನ್ನು ಅಂಗಳದಲ್ಲಿಯೇ ಒಗೆದಳು. ಕಾಶಿಯು ಒಳಗೆ ಒಲೆಯ ಹತ್ತಿರ ಇದ್ದಳು. ಬಾಪ್ಪಾ ನೆಟ್ಟಗೆ ಅಲ್ಲಿಗೇ ಹೋದರು. ವಿದ್ಯಾಧರನು ಅಂಗಳದಲ್ಲಿ ನಿಂತು ಮೇಲೆ ಆಕಾಶದ ಕಡೆಗೆ ನೋಡು ತ್ತಿದ್ದ. ಮನೆಯ ಸುತ್ತಲಿನ ತೆಂಗಿನ ಮರಗಳಿಂದ ಮರೆಯಾದ ಆಕಾಶವು ಗಿಡಗಳೊಳಗೆ ಕಾಣುವ ಸಣ್ಣ ಸರೋವರದಂತೆ ಭಾಸವಾಗು ತ್ತಿತ್ತು. ಅದರಲ್ಲಿ ಆದೇ ಮಿನುಗಹತ್ತಿದ ಚಿಕ್ಕೆಗಳು ಅರಳತೊಡಗಿದ ಕಮಲಗಳಂತಿದ್ದವು. ಗಾಳಿಯು ಈ ಸರೋವರದ ಮೇಲಿಂದ ಬಂದಿರುವ ದೇನೋ ಎಂಬಂತೆ ತಂಪಾಗಿತ್ತು. ಪ್ರಸನ್ನಮನಸಿನಿಂದ ವಿದ್ಯಾಧರನು

ತನ್ನ ದೃಷ್ಟಿಯನ್ನು ಕೆಳಗೆ ತಿರುಗಿಸಿದ. ಅಂಗಳದಲ್ಲಿ ಒಂದು ಬದಿಗೆ ನಿಂತಿದ್ದ ಕೃಷ್ಣೆಯನ್ನು ನೋಡಿದ. ಅವಳ ಶ್ಯಾಮಲವಾದ ಅಂಗಕಾಂತಿ, ವಲ್ಕಲದಂತೆ ತೋರುವ ಸೀರೆ, ಕಮಲಗಳಂತೆ ಶೋಭಿಸುವ ಕಣ್ಣುಗಳು– ಏನೋ ಒಂದು ತರದ ಶೀತಲವಾದ ತೆರೆಗಳು ವಿದ್ಯಾಧರನ ಮನವನ್ನು ಸ್ಪರ್ಶಿಸಿ ಮಾಯವಾದವು. ಟೊಂಕದ ಮೇಲಿನ ಮಣ್ಣು ಕೊಡವನ್ನು ಹಿಡಿದುಕೊಂಡು ಅವಳು ಹಾಗೇ ನಿಂತಿದ್ದಳು.

'ಏನು ನಡೆಸೀದಿ ಕೃಷ್ಣಾ'

'ಮಲ್ಲಿಗೆ ಕಂಟಿಗೆ ನೀರು ಹಾಕತೀನಿ'

'ಈ ದಿವಸದೊಳಗೆ ಮಲ್ಲಿಗೆ ಹೂ ಬಿಡುವದೇನು'

'ಬಿಡಿಸಿದರ ಬಿಡತದೆ'

'ಅಂದರೆ! ಮಲ್ಲಿಗೆ ಹೂ ಬಿಡುವದು ಮಳೆಗಾಲದಲ್ಲಿಯಲ್ಲವೇ?'

'ಬೇಸಿಗೆಯೊಳಗೆ ಅದಕ್ಕೂ ಚೆನ್ನಾಗಿ ಹೂ ಬಿಡುತ್ತದೆ. ಆದರೆ ಒಂದು ಮಾತ್ರ ಮಾಡಬೇಕಾಗತದೆ.'

'ಏನದು?'

'ಹುರಪಳಿಸುವದು'

'ಅಂದರೆ? ಬಳ್ಳಿ ಸುಟ್ಟು ಹಾಕಿ ಬಿಡಬೇಕೆ?'

ಕೃಷ್ಣೆಯು ನಗುತ್ತ ಹೇಳಿದಳು—'ಹೌದು ಮೇಲೆ ಮೇಲೆ ಸುಡಬೇಕು. ಬೇರಿನೊಳಗೆ ಅಲ್ಲಿಂದ ತುಂಬ ನೀರು ಹಾಕಬೇಕು.'

'ಅಂದರೆ ಬೇಸಿಗೆಯೊಳಗೂ ಹೂ ಬಿಡತದೆ?'

'ಹೌದು! ಮಳೆಗಾಲಕಿಂತ ನೆಟ್ಟಗೆ!'

'ನನಗಿದು ಗೊತ್ತಿದ್ದಿಲ್ಲ!'

'ನನಗಾದರೂ ಎಲ್ಲಿ ಗೊತ್ತಿತ್ತು? ಇಲ್ಲಿ ಬಂದ ಮೇಲೇ ಗೊತ್ತಾಯಿತು'

'ಕಾಮಾಪೂರ ಅಂದರೊಂದು ವ್ಯವಹಾರದ ಕಾಲೇಜನೇ ಅದೆ ಅನ್ನಬಾರದೆ!'

ವತ್ಸಲೆ ಸುಮ್ಮನೆ ನಕ್ಕಳು. ಬಳ್ಳಿಯ ಕಡೆಗೆ ನೋಡುತ್ತ ಅವಳು

ಹೇಳಿದಳು—'ಇನ್ನೂ ಏನು ಹೂ ಬಿಡಲಿಕ್ಕೆ ಹತ್ತಿಲ್ಲ ಇದು. ಎರಡೇ ಮೊಗ್ಗೆ ಕಾಣಿಸುತ್ತವೆ. ಅಂದರೂ ಎಷ್ಟು ಅವುಗಳ ಸುವಾಸನೆ!

ಅವಳು ಟೊಂಕದ ಮೇಲಿನ ಕೊಡವನ್ನು ಕೆಳಗಿಟ್ಟಳು. ಮೆಲ್ಲಗೆ ಆ ಎರಡು ಮೊಗ್ಗೆಗಳನ್ನು ತೆಗೆದು ವಿದ್ಯಾಧರನಿಗೆ ಕೊಡಲಿಕ್ಕೆ ಕೈ ಮುಂದೆ ಮಾಡಿದಳು. ಅವನ್ನು ತೆಗೆದುಕೊಂಡು ಮೂಸುತ್ತ ಮೂಸುತ್ತ ಅವನಂದ–'ಎಂಥಾ ಮಧುರ ವಾಸನೆ! ಇನ್ನೂ ಪೂರ್ಣ ಅರಳಿಲ್ಲ, ಇನ್ನು ಅರಳಿದ ಮೇಲೆ!

ಅವನು ಸ್ನಿಗ್ಧದೃಷ್ಟಿಯಿಂದ ವತ್ಸಲೆಯನ್ನು ನೋಡಿದ. ಅವನು ಮಾತಾಡುತ್ತಿದ್ದುದು ಬಳ್ಳಿಯ ವಿಷಯಕ್ಕೊ ತನ್ನ ವಿಷಯಕ್ಕೊ ಎಂಬ ದೊಂದು ಅವಳಿಗೆ ಒಗಟವೇ ಆಯಿತು. ಆದರೆ ಅದರ ವಿಚಾರವನ್ನು ಮಾಡದೆ ಅವಳು ಒಮ್ಮೆಲೆ ಅಂದಳು—

'ನಾನೊಂದು ಕೇಳಿಕೊಳ್ಳಬೇಕಾಗಿದೆ ನಿಮ್ಮ ಹತ್ತಿರ!'

'ಏನದು?'

'ಆ ಫೋಟೋ ತೆಗೆದಿರಲ್ಲ ಇವೊತ್ತು ನನ್ನದು'

'ಅದರ ಪ್ರತಿಗಳು ಬೇಕೇ?'

'ಉಂ. .ಹುಂ. ಛಾಪಿಸಲಿಕ್ಕೆ ಕೊಡಬೇಡಿರಿ ಅವನ್ನು!'

'ಯಾಕೆ?'

'ಯಾಕೆ? ಇವೊಂದು ಶಬ್ದದಲ್ಲಿ ಜಗತ್ತಿನ ದುಃಖಗಳೆಲ್ಲವೂ ಸಂಗ್ರಹವಾಗಿವೆಯೇನೋ ಎಂದು ವತ್ಸಲೆಗೆನಿಸಿತು. ಆದರೆ ಉತ್ತರ ಕೊಡಲೇಬೇಕೆಂದು ಅವಳೆಂದಳು—'ಆದರಿಂದ ಮತ್ತೆ ನನ್ನ ಪತ್ತೆ ಹತ್ತ ಬಹುದು'

'ಯಾರಿಗೆ?'

'ಮನೆಯ ಯಜಮಾನರಿಗೆ?'

'ನೆರೆಯ ಚಟ ಇದೆಯೇನು ಅವನಿಗೆ?'

'ಹೌದು. ಆ ನೆರೆಗೆ ಕಲೆ ಎನ್ನುತ್ತಾರೆ' ಎಂಬ ಉತ್ತರವು

ವತ್ಸಲೆಯು ತುದಿನಾಲಿಗೆಗೆ ಬಂದಿತ್ತು. ಆದರೆ ಅವಳು ಅದನ್ನು ಹಾಗೇ ನುಂಗಿ ಕಷ್ಟದಿಂದೆಂದಳು—'ನಾನವರ ಮನಸ್ಸಿಗೆ ಬರುವದಿಲ್ಲ'

'ನೀನೇ?' ನಿನ್ನಂತಹ ಹುಡುಗಿ ಬಿಳಯಂಗಿಯವರಲ್ಲಿ ಕೂಡ ಖಪ್ಪಿಸಿಹೋಗಬಹುದು'

ಅಂದು ರಾತ್ರಿಯಲ್ಲಿ ರಮಾಕಾಂತನಂದದ್ದು ವತ್ಸಲೆಗೆ ನೆನಪಾಯಿತು. ರಮಾಕಾಂತ ವಿದ್ಯಾಧರರ ದೃಷ್ಟಿಯಲ್ಲಿ ಎಷ್ಟು ಅಂತರ! ತನ್ನ ಲಗ್ನವು ರಮಾಕಾಂತನೊಡನೆ ಆಗುವದರ ಬದಲು ವಿದ್ಯಾಧರನೊಡನೆ ಆಗಿದ್ದರೆ—ಆಗಿದ್ದರೆ ಇಂದು ಗೋಡಂಬಿಯ ಕಾರಖಾನೆಯಲ್ಲಿ ಕೂಲಿ ಮಾಡಲಿಕ್ಕೇಕೆ ಬರುತ್ತಿದ್ದೆ? ಯಂತ್ರ ಶೋಧಿಸುವ ವಿದ್ಯಾಧರನ ಪತ್ನಿಯೆಂದು ಬರುತ್ತಿದ್ದೆ. ಈ ಸುಂದರವಾದ ಗುಡ್ಡದ ಮೇಲೆ ಅವನೊಡನೆ ಅಡ್ಡಾಡಲಿಕ್ಕೆ ಹೋಗುತ್ತಿದ್ದೆ. ಮಲ್ಲಿಗೆಯ ಮೊಗ್ಗೆಗಳನ್ನು ಹರಿದು ಅವನ ಕೈಗೆ ಕೊಟ್ಟರೆ ಅವನು ಅವನ್ನು ತಿರುಗಿ ತನ್ನ ತಲೆಯಲ್ಲಿ ಮುಡಿಸುತ್ತಿದ್ದ—ವತ್ಸಲೆಯ ಒಳಮನಸ್ಸಿನ ಇಚ್ಛೆಗಳೆಲ್ಲವೂ ಜಾಗ್ರತವಾದವು. ಮಳೆಗಾಲ ಬಂದ ಕೂಡಲೆ ಗಿಡಗಳಲ್ಲಿ ಮಿಂಚು ಹುಳುಗಳು ಹೊಳೆಯಹತ್ತುವಂತೆ. ಕಳೆದ ಒಂದು ತಿಂಗಳಲ್ಲಿಯ ವಿದ್ಯಾಧರನ ಪ್ರೇಮದ ಸತತೆಯಿಂದ ಆರ್ದ್ರವಾದ ಅವಳ ಮನದಲ್ಲಿ ಹಾಗೆಯೇ ಎಲ್ಲ ಆಶೆಗಳೂ ಕುಣಿಯತೊಡಗಿದವು. ಆದರೆ ಆ ಆಶೆಗಳೆಲ್ಲವನ್ನು ತಡೆಯುವ ವಿಚಾರವೊಂದು ಕೂಡಲೆ ಹೊಳೆಯಿತು. ತಾನು ಗುಡ್ಡದ ಮೇಲೆ ವಿದ್ಯಾಧರನೊಡನೆ ತಿರುಗಾಡಲಿಕ್ಕೆ ಹೋಗಿದ್ದರೆ—ಆ ಕುರಿಮರಿಗಳು ತನ್ನ ಹತ್ತಿರ ಬರುತ್ತಿದ್ದವೇ?

ಅವಳ ಮನದಲ್ಲಿಯ ವಿಚಾರವು ಅವಳಿಗೆ ತಿಳಿಯದೆಯೆ ಮೋರೆಯ ಮೇಲೆ ಮೂಡಿತು. ವಿದ್ಯಾಧರನು ಅವಳ ಸಮೀಪಕ್ಕೆ ಬಂದು ನುಡಿದ—'ಕೃಷ್ಣಾ, ನಾನೊಂದು ಮಾತು ಕೇಳಲೆ?'

ವತ್ಸಲೆಯ ಎದೆ ಒಡೆದುಕೊಳ್ಳಹತ್ತಿತು. 'ನಿನಗೆ ಸಿಟ್ಟು ಬರಲಿಕ್ಕಿಲ್ಲವಷ್ಟೇ?' ಎಂದು ತಡವರಿಸುತ್ತ ವಿದ್ಯಾಧರನು ಕೇಳಿದ.

ಪ್ರಣಯದ ಉತ್ಕಂಠೆಯಿಂದಲೂ ಪಾಪದ ಭೀತಿಯಿಂದಲೂ,

ಕರ್ತವ್ಯದ ಜಾಗೃತಿಯಿಂದಲೂ ಅವಳ ಹೃದಯವು ಒಮ್ಮೆಲೇ ಮೂರು ಭಾಗವಾಯಿತು. ಅವಳೇನೋ ಮಾತಾಡಬೇಕೆನ್ನುವಷ್ಟರಲ್ಲಿ ಕಾಶಿಯು ಕೆಮ್ಮಿದ್ದು ಅವಳಿಗೆ ಕೇಳಬಂತು. ಇಬ್ಬರೂ ಬೆಚ್ಚಿ ಒಮ್ಮೆಲೆ ದೂರ ಸರಿದರು. ಕಾಶಿಯೂ ಅವಳ ಹಿಂದಿನಿಂದ ಬಾಪ್ಪಾ ಅವರೂ ಅಂಗಳದಲ್ಲಿ ಬಂದರು.

'ಒಳ್ಳೇದು ಕೃಷ್ಣಾ' ಬಾಪ್ಪಾ ಅಂದರು, ವಿದ್ಯಾಧರನು ಏನು ಮಾತಾಡದೆ ಬಾಪ್ಪಾ ಅವರ ಹಿಂದೆ ಹೊರಟ.

ಅವರಿಬ್ಬರೂ ಒಂದು ಕೂಗಳತೆಯಷ್ಟು ಹೋದದ್ದನ್ನು ನೋಡಿ ಕಾಶಿಯೆಂದಳು—

'ಕೃಷ್ಣಾ, ಮನುಸ್ಯಾರಿಗೆ ಮನದ ನಾಚಿಕಿ ಇಲ್ಲದಿದ್ದರ ಜನದ ನಾಚಿಕಿಅರ ಇರಬೇಕು. ಬಾಪ್ಪಾ ಏನಂದಾರು? ನಾ ಹುಟ್ಟಿ ಅರವತ್ತು ವರ್ಸಾದವು, ಆದರ ಇಂತಾ ಹೇಸಿ ಕೆಲಸ! ಥೀ ಥೀ! ನಾಳಿನಿಂದ ಕಾರ ಕಾನಂತೂ ಬಂದ ಆತು! ನಿನ್ನ ಹೊಟ್ಟಿ ತುಂಬುವ ಬಗಿ ಹೆಂಗ?'

ಕಳೆದ ತಿಂಗಳಲ್ಲಿ ಕಾಶಿಯ ಲೋಭಿ ಸ್ವಭಾವವು ವತ್ಸಲೆಗೆ ಪೂರಾ ಪರಿಚಿತವಾಗಿತ್ತು. ಸೋನ್ಯಾನಕಿಂತಲೂ ಅವನ ತಾಯಿಯ ಕಡೆಯಿಂದ ಬರುವ ರೊಕ್ಕದ್ದೇ ಅವಳಿಗೆ ಹೆಚ್ಚು ಮಹತ್ವವೆನಿಸುತ್ತದೆಂಬದೂ ಅವಳಿಗೆ ತಿಳಿದಿತ್ತು. ಮೊದಲನೇ ದಿವಸ ಕೆರೆಯ ದಂಡೆಯ ಮೇಲೆ ಅವಳು ತನ್ನೊಡನೆ ಪ್ರೀತಿಯಿಂದ ವರ್ತಿಸಿದ್ದೇನೋ ನಿಜ. ಆದರೆ ಪುಕ್ಕಟೆಯಾಗಿ ಕೈಗೆ ಸಿಗುವ ಒಂದು ಆಳನ್ನು ಕಳೆದುಕೊಳ್ಳುವಷ್ಟು ಅವಳು ಹುಚ್ಚಿಯಾಗಿರಲಿಲ್ಲವೆಂಬದೇ ಅದರ ಕಾರಣವಾಗಿತ್ತು. ನಾಳಿನಿಂದ ತಾನು ನಿರುದ್ಯೋಗಿಯಾಗುವಳೆಂಬ ಕಾರಣದಿಂದಲೇ ಕಾಶಿಯು ತನ್ನ ಮೇಲೆ ಮತ್ತಿಷ್ಟು ಸಿಟ್ಟಿಗೆದ್ದಳೆಂಬದು ತಟ್ಟನೆ ವತ್ಸಲೆಯ ಲಕ್ಷ್ಯಕ್ಕೆ ಬಂದಿತು.

ಕಾಶಿ ಪುತ್ತೆ ಪ್ರಾರಂಭ ಮಾಡಿದಳು: 'ಬಾಜಾರದಾಗ ಹೂ ಒಯ್ದು ಮಾರೇನೆಂದು ನೀನಂದೀ. ಆದರ ಹೂವಿಗೆ, ಟೊಂಕ ಮುರಿದು ನೀರು ಹೊತ್ತ ಹಾಕುವ ತ್ರಾಣ ಎಲ್ಲೈತಿ ನಿನಗ? ಆ ದಿವಸ ತೆಂಗಿನಕಾಯ ಬುಟ್ಟಿ ತಲೀ ಮ್ಯಾಗ ಹೊರಿಸಿದರ ಮೂರು ದಿವಸ ಗೋಣು ನೋಯತವಾ ತ

ಅಳತಿದ್ದಿ. ಇಂತಾ ವ್ಯಾಣದ ಹೆಂಗಸು ಬಿಳಿಯಂಗಿಯವರಿಗೆ ದಕ್ಕೀತು, ಆದರ ನಮ್ಮ ಜಾತ್ಯಾಗ'

ಕಾಶಿಯ ಸ್ವರವು ಒಮ್ಮೆಲೆ ಮೃದುವಾಯಿತು. ಮಳೆ ಇಳಿದ ಕೂಡಲೆ ಹವೆಯಲ್ಲಿ ಒಮ್ಮೆಲೆ ತಂಪು ಹುಟ್ಟುವಂತೆ ತನ್ನ ಕಡೆ ಏನಾದರೂ ಕಾಶಿಯ ಕೆಲಸವಿದೆ ಎಂಬದು ಆವಳ ಬದಲಾದ ಸ್ವರದಿಂದ ವತ್ಸಲೆ ಊಹಿಸಿದಳು.

ಕಾಶಿಯೆಂದಳು—'ಇದೇ ಈಗ ಹೇಳಿದ್ದು ನಾ ಸುಮ್ಮನ ಹೇಳ ಲಿಲ್ಲ. ಈ ಬಿಳಿಯಂಗಿಯವರ ಕೂಡ ಜ್ವಾಕಿಯಿಂದಿರಬೇಕು ತಂಗೀ. ಇಲ್ಲದಿದ್ದರ ಈ ಸೋನ್ಯಾನ ಹುಡುಗ ಏನಾದರೊಂದು—'

ಕ್ಷಣಹೊತ್ತು ನಿಂತು ಆವಳು ಮತ್ತೆ ನುಡಿದಳು—'ಹಾಳಾಗಿ ಹೋಗೊಲ್ಲದ್ಯಾಕ ಅದೆಲ್ಲ! ನಾಳೆ ನಾ ಬೆಳಗಾಂವಿಗೆ ಹೋಗತೀನಿ. ಮನಿ ನೋಡಿಕೊಂಡಿರತೀ ಇಲ್ಲೊ?'

'ಸೋನ್ಯಾ ನಾನೂ ಇರತೀವಲ್ಲ'

'ಸೋನ್ಯಾನ್ನೂ ನಾ ಕರಕೊಂಡು ಹೋಗೂಆಕಿ, ಆವರವ್ವ ಬಂದಾಳ ಅಲ್ಲಿ. ಮಗನ್ನ ನೋಡಬೇಕಂತಾಳ'

'ನಾನೊಬ್ಬಳೂ ಇರತೇನಿ ಹಂಗಾದರ.'

'ಮತ್ತೊಂದು ನೋಡು ಕೃಷ್ಣಾ! ಸೋನ್ಯಾ ತನಗ ಅಬಚಿ ಒಬ್ಬಾಕಿ ಇದ್ದಾಳಂತ ತಮ್ಮಪ್ಪಗ ಹೇಳತಾನ. ಆಕಿ ಬಾಳ ಶ್ರೀಮಂತ ಇದ್ದಾಳ. ನಾ ಸುದ್ದಾ ಹೇಳತೀನಿ ಹುಡುಗನ ವ್ಯಾಗ ಅಬಚೀ ಪಿರುತಿ ಬಹಳ ಅದ, ಆಕಿಗೊಂದು ಸೀರೀ ಕೊಡಂತ'—ಕಾಶಿಯು ಸೀರೆಯ ಆಸೆಯನ್ನು ಮುಂದೆ ಮಾಡಿದ್ದನ್ನು ನೋಡಿ ವತ್ಸಲೆಗೆ ನಗೆ ಬಂದಿತು. ಕಾಶಿಗೆ ಅದು ಹೇಗೋ ಅನಿಸಿತು, ಆವಳಂದಳು:—'ನಗತೀ ಏನ ತಂಗೀ, ಸಂಬಾಳಿಸಿ ಗೊಂಡು ಇರು. ಒದರಿ ಕರದಿ ಅಂದರ ಆವಾರದಾಗಿನ ಮಂದಿ ಬಂದೂ ಬರತಾರ. ಆದರ ಕಂಪ ಹೊತ್ತಿನಾಗ ಕಂಪವರ ಕೂಡ ಮಾತಾಡತ ಕೂಡಬ್ಯಾಡ. ನಿನಗ ಗೊತ್ತಿಲ್ಲೂ, ಈ ದಾದಾ ಕಾರಭಾರಿದಾರ, ದರ ದಿವಸ ದೇವಿ ಮುಂದ ನೆಲಕ ಮೂಗ ತಿಕ್ಕತಾನಲ್ಲಾ, ಅಂದ್ರೂ—'

ಕಾಶಿಯು ಗಟ್ಟಿಯಾಗಿ ನಕ್ಕಳು. ಕಾಶಿಯದು ಆದೊಂದು ಲಹರಿ. 'ಅಂದ್ರೂ' ಅನ್ನುವದು ಮತ್ತು ಗಟ್ಟಿಯಾಗಿ ನಗುವದು! ಇದು ಅವಳ ಪದ್ಧತಿಯೇ ಆಗಿದ್ದು ವತ್ಸಲೆಗೆ ಗೊತ್ತಿತ್ತು. ವಿಶೇಷವಾದ ಮಾತುಕತೆ ಇಲ್ಲದೆ ಊಟವಾಯಿತು. ಕಾಶಿಯು ಬೆಳಗಾಂವಿಗೆ ಹೋಗಲಿಕ್ಕೆ ತನ್ನ ಗಂಟು ಕಟ್ಟಹತ್ತಿದಳು. ಸೋನ್ಯಾನು ಹಾಸಿಗೆಯ ಮೇಲೆ ಕುಳಿತು ಆತುರದಿಂದ ಚಡಪಡಿಸುತ್ತಿದ್ದ.

'ಅಬಚೀ, ನಿನ್ನ ಎಲ್ಲಾ ಕತೀ ಅವ್ವಗ ಹೇಳತೀನಿ'

'ಯಾವೋ ಅವು?'

'ರಾಮುನದು, ಕೃಷ್ಣನದು, ಮಾರುತೀದು—'

'ಇಷ್ಟೇ?'

'ಮತ್ತ ಧ್ರುವಂದು'

'ಆದರ, ಅಬಚೀ, ಧ್ರುವ ಒಬ್ಬ ಇದ್ದೋ ಇಬ್ಬರು ಇದ್ದರೋ?'

ಅಜ್ಞಾನ-ಜ್ಞಾನಗಳು ಒಂದಕ್ಕೊಂದು ಇಷ್ಟು ಸಮೀಪದಲ್ಲಿ ಹೇಗೆ ಬರುವವೆಂಬುದು ವತ್ಸಲೆಗೆ ಆಶ್ಚರ್ಯವೆನಿಸಿತು. ಅವಳು ನಕ್ಕು ಹೇಳಿದಳು.

'ಹುಚ್ಚಾ, ಧ್ರುವ ಒಬ್ಬನೇ ಇದ್ದ'

'ಯಾವ ಅವ?'

'ಅಪ್ಪನ ತೊಡೆಯ ಮೇಲಿಂದ ಮಲತಾಯಿ ಅವನನ್ನು ನೂಕಿದಳು'

'ಅಲ್ಲಿಂದ ಅವ ಅಡವಿಗೆ ಹೋದ. ಅಲ್ಲಿ ಅವಗ ದೇವರು ಭೆಟ್ಟಿ-ಯಾದರು. ಅವನಽ ಹೌದಲ್ಲೋ?'

'ಹೌದು ಅವ ಒಬ್ಬನೇ ಧ್ರುವ'

'ಮತ್ತ ಅವನ ತಮ್ಮ?'

'ಯಾರವ?'

'ಅವನ ಮಲತಾಯಿ ಮಗ! ರಾಜನ ತೊಡೀಮ್ಯಾಲೆ ಕೂತವ'

'ಅವ ಧ್ರುವ ಅಲ್ಲ'

'ಯಾಕ? ಅವ ಧ್ರುವನ ತಮ್ಮನೇ ಅಲ್ಲs?'

'ಹೌದು. ಆದರ ಹೆಸರು ಬೇರೆ ಅದೆ'

'ಇನ್ನ ತಪ್ಪೂದಿಲ್ಲ ಅವ್ವನ ಮುಂದ ಹೇಳೂಮುಂದ. ಧ್ರುವ ಒಬ್ಬನೇ ಅಲ್ಲs'

ಸೋನ್ಯಾನ ಬಾಲಭಾವದಿಂದ ನುಡಿದ ಈ ಶಬ್ದಗಳು ಮನುಷ್ಯ ಜೀವನವನ್ನು ನಿರೀಕ್ಷಿಸಿ ಮುಪ್ಪಾದ ಕಾಲಪುರುಷನೇ ಉಚ್ಚರಿಸಿದಂತೆ ಭಾಸವಾಯಿತು.

ಆಕಳಿಸುತ್ತ ಸೋನ್ಯಾ ಅಂದ:–

'ಧ್ರುವ ಒಬ್ಬನೇ. ಹೌದಲ್ಲೋ ಆಬಚೀ?'

ಧ್ರುವ ಒಂದೇ? ಛೇ! ಎರಡು! ಧ್ರುವ ಒಂದೇ ಆದರೆ ವಿದ್ಯಾಧರನ ಬಗ್ಗೆ ತನ್ನಲ್ಲಿ ಕ್ಷಣಹೊತ್ತಾದರೂ ಉಂಟಾದ ಕಲ್ಪನೆಯು ಅದೇ ಧ್ರುವವೇ?

ಛೇ! ಅದಕ್ಕೆ ಧ್ರುವವೆಂದರೆ ಕಳೆದ ಒಂದೂವರೆ ತಿಂಗಳಲ್ಲಿ ಕೂಲಿ-ಕಾರರಲ್ಲಿದ್ದು ತಾನು ದೊರಕಿಸಿದ ಅನುಭವ ಅದಕ್ಕೇನನ್ನಬೇಕು?

ಧ್ರುವ ಒಂದಲ್ಲ, ಎರಡು.

ರಮಾಕಾಂತ ಮತ್ತು ಬಾಪ್ಪಾ ಅವರು!

ವಿದ್ಯಾಧರ ಮತ್ತು ದಾದಾ!

ತಾನು ಮತ್ತು—ಯಾರು? ಸುಲೋಚನೆಯೋ ಸುರಂಗೆಯೋ?

ಕಲೆ ಮತ್ತು ಜೀವನ, ಬಿಳಿಯಂಗಿಯವರು ಮತ್ತು ಕೂಲಿಕಾರರು, ಭೋಗ ಮತ್ತು ತ್ಯಾಗ. ವತ್ಸಲೆಗೆ ಎಲ್ಲೆಲ್ಲಿಯೂ ಧ್ರುವಗಳು ಜೋಡು ಜೋಡಾಗಿಯೇ ಕಂಡವು. ಧ್ರುವಗಳು ಎರಡೆಂಬುದೇ ನಿಜ! ಆದರೆ ಅವುಗಳ ನಡುವಿನ ಭಯಂಕರ ಅಂತರವೆಷ್ಟು! ಈ ಅಂತರದಿಂದಲೇ ಜಗತ್ತಿನಲ್ಲಿಯ ಎಲ್ಲ ದುಃಖಗಳು ಉದ್ಭವಿಸಿವೆ.

ಈ ಅಂತರವು ಕಡಿಮೆ ಹೇಗಾಗಬೇಕು? ಎರಡು ಧ್ರುವಗಳು ಎಂದಾದರೂ ಒಂದಾದಾವೇ?

ಈ ಕಡೆಯ ವಿಚಾರದಿಂದ ವತ್ಸಲೆಗೆ ರಮಾಕಾಂತನ ಆ ಹೊತ್ತಿ-ಗೆಯ ನೆನಪಾಯಿತು. ಎರಡನೇ ಧ್ರುವದ ಕಡೆಗೆ ಬರುವಾಗ ತನ್ನದೆಂಬ ಒಂದು ಒಡವೆಯನ್ನೂ—ಒಂದು ಹೊಸ ಸೀರೆಯನ್ನೂ ಕೂಡ ತರಲಿಲ್ಲ. ಆದರೆ ಆ ಹೊತ್ತಿಗೆ–ಅದನ್ನೇಕೆ ಇಂದಿನ ವರೆಗೆ ಕಾಯ್ದು ಇಟ್ಟಿರಬೇಕು? ಎರಡು ಧ್ರುವಗಳ ನಡುವೆ ತನ್ನ ಜೀವದ ಎಳೆದಾಟವಾಗಲಿಕ್ಕೆ ಕಾರಣ ವೆಂದರೆ ಆ ಹೊತ್ತಿಗೆಯೇ. ಅದನ್ನೇ ಸುಟ್ಟುಹಾಕಿದರೆ?—

ಅಲ್ಲಿಂದ ಅವಳು ಅರ್ಧ ಎದ್ದಳು ಕೂಡ. ಆದರೆ ಮೊದಲನೆಯ ಮಾತೆಂದರೆ ಈ ಹೊತ್ತಿನಲ್ಲಿ ಏನಾದರೂ ಸುಟ್ಟಿದ್ದರೆ ಕಾಶಿಗೆ ಸಂಶಯ ಬರುತ್ತಿತ್ತು. ಮತ್ತೊಂದೆಂದರೆ,–ಅವಳ ಮನಸದಲ್ಲಿ ಬಂದಿತು,ಆ ಹೊತ್ತಿಗೆ ಎಂದರೆ ರಮಾಕಾಂತನ ಕಲೆಯಮೇಲೆ ಪ್ರಕಾಶ ಚಲ್ಲುವ ವಿದ್ಯುದ್ದೀಪವೇ ಅಲ್ಲವೆ? ಅದನ್ನು ಹರಿದುಹಾಕುವದರಿಂದ ಆಗುವ ಲಾಭವಾದರೂ ಏನು ಇದಲ್ಲದೆ ರಮಾಕಾಂತನ ಬರಹದ ಬೆನ್ನ ಹಿಮ್ಮಗ್ಗಲಿಗೇ ತನ್ನ ಅನುಭವ ಗಳನ್ನು ಬರೆದಿಟ್ಟಿದ್ದಳು. ನಿದ್ದೆಗೆ ಬಂದಿದ್ದ ಸೋನ್ಯಾ ಅಲ್ಲಿಯೇ ಮಲಗಿದ್ದ. ಅವನ ಗೋಣು ನೊಂದೀತೆಂದು ವತ್ಸಲೆಯು ಅವನನ್ನು ಸೆಟ್ಟಿಗೆ ಮಲಗಿಸ ಹೋದಳು.

ಸೋನ್ಯಾ ನಿದ್ದೆಯಲ್ಲಿ ಕನವರಿಸಿದ:–

'ಧ್ರುವ ಒಬ್ಬನೇ! ಅಲ್ಲs ಅಬಜೀ?'






*The magic beauty of this Cream is its invisibility to the naked-eye and the Natural tone imparted — to the skin.*

Manufactured by the makers of the Famous Mysore Sandal Soap

## GOVT. SOAP FACTORY

BANGALORE

# ನಮ್ಮ ಸಹಾಯಕರು ಮತ್ತು ಪೋಷಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ಈ ವರ್ಷವೂ ನೆರವಿತ್ತು ಪ್ರೋತ್ಸಾಹಿಸಿದ ಮಹನೀಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ. ಇದರಂತೆ ಕನ್ನಡಿಗರೆಲ್ಲರೂ ಸಹಾಯಕರಾಗಿಯಾಗಲಿ, ಪೋಷಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

**ಪೋಷಕರು :—**

ಶ್ರೀ. ಎಚ್. ಬಿ. ಕೊಣ್ಣೂರ ಎಂ. ಎ. ಬಿಜಾಪುರ ೧೦೦ ೦

**ಸಹಾಯಕರು :—**

೧. ಶ್ರೀ. ಜಿ. ವಿ. ಬೇವೂರು ಆಯ್. ಸಿ. ಎಸ್.
ಡಾಯರೆಕ್ಟರ ಜನರಲ್ ಆಫ್ ಪೋಸ್ಟ್ಸ, ದಿಲ್ಲಿ ೫ ೦ ೦

೨. ಶ್ರೀ. ವ್ಹಿ. ಎನ್. ಅಡವಿ, ಅಸಿಸ್ಟಂಟ ಅಕೌಂಟಂಟ್
ಜನರಲ್, ಮುಂಬಯಿ ೫ ೦ ೦

೩. ಡಾ. ಎಸ್. ಸಿ. ನಂದೀಮಠ ಎಂ. ಎ. ಪಿ. ಎಚ್. ಡಿ.
ಬೆಳಗಾಂವಿ ೫ ೦ ೦

೪. ಶ್ರೀ. ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಬಿ. ಎಲ್., ಗವ್ಹರ್ನಮೆಂಟ ಓರಿಯಂಟಲ್ ಟ್ರಾನ್ಸ್‌ಲೇಟರ ಬೆಂಗಳೂರು ೫ ೦ ೦

೫. ,, ಆರ್. ಎ. ಜಾಗೀರದಾರ ಎಂ. ಎ. ಎಲ್‌ಎಲ್. ಬಿ.
ಮುಂಬೈ ೫ ೦ ೦

೬. ,, ನಾರಾಯಣರಾವ ಜೋಶಿ ಬಿ. ಎ. ಎಲೆಲ್ ಬಿ.
ಬೆಳಗಾಂವಿ ೫ ೦ ೦

೭. ,, ಆರ್. ಜಿ. ದೇಶಪಾಂಡೆ ಎಂ. ಎ.
ಇನ್‌ಕಮ್ ಟ್ಯಾಕ್ಸ ಆಫೀಸರ, ಸಾತಾರಾ ೫ ೦ ೦

೮. ,, ಎಂ. ಪಿ. ವಾಲಿ ಎಂ. ಎ. ಚೀಫ್ ಆಫೀಸರ,
ಬೆಳಗಾಂವಿ ೫ ೦ ೦

೯. ಶ್ರೀ. ಮೋಹನರಾವ್ ಕರೀಕಟ್ಟಿ ಬಿ. ಎ.
ಸಬ್‌ರಜಿಸ್ಟ್ರಾರರು ಗದಗ ೫ ೦ ೦
೧೦. ,, ಎ. ಎಂ. ದೇಸಾಯಿ ಬಿ. ಎ.
ಸಬ್‌ರಜಿಸ್ಟ್ರಾರ್ ಚಿಕ್ಕೋಡಿ ೫ ೦ ೦
೧೧. ಡಾ. ಎಚ್. ಆರ್. ತೆರಗುಂಡಿ ಬೆಳಗಾಂವಿ ೫ ೦ ೦
೧೨. ಡಾ ಆರ್. ಎಸ್. ಗುಡಿ ಎಲ್. ಸಿ. ಪಿ. ಎಸ್.
ಬಿಜಾಪುರ ೫ ೦ ೦
೧೩. ಶ್ರೀ. ಅಶ್ವಥರಾವ ಮುಷಿಷಿ ವಕೀಲರು, ಶಿರಹಟ್ಟಿ ೫ ೦ ೦
೧೪. ,, ಶ್ರೀಮಂತ ಸರದಾರ ಬಾಳಾಸಾಹೇಬ
ಭೀಮಪ್ಪ ಗಿರಿಯಪ್ಪ ದೇಸಾಯಿ, ಕೌಜಲಗಿ ೫ ೦ ೦
೧೫. ,, ಶ್ರೀಮಂತ ವೆಂಕಟಾದ್ರಿ ಶ್ರೀನಿವಾಸ ಬಹದ್ದೂರ
ದೇಸಾಯಿ, ಸೊರಟೂರ ೫ ೦ ೦
೧೬. ,, ಗೋಕುಲದಾಸ ವಿಠ್ಠಲದಾಸ ವಾರಕರ
ವ್ಯಾಪಾರಸ್ಥರು ಗದಗ ೫ ೦ ೦
೧೭. ,, ವಲ್ಲಭದಾಸ ಪುಣೇಕರ ಸಾಹುಕಾರರು
ಗದಗ ಬೆಟಗೇರಿ ೫ ೦ ೦
೧೮. ,, ಎಲ್. ಜೆ. ವಿಜಾಪುರ ವ್ಯಾಪಾರಿಗಳು
ಬಾಗಿಲುಕೋಟೆ ೫ ೦ ೦
೧೯. ,, ರಾಘವೇಂದ್ರರಾವ ಮುನಸಬ್ದಾರ, ಹೈದ್ರಾಬಾದ ೫ ೦ ೦
೨೦. ,, ಕಲ್ಲಪ್ಪಾ ಸೋಮಪ್ಪಾ ಗುಂಜಾಳ ಧಾರವಾಡ ೫ ೦ ೦
೨೧. , ಸಿ. ಸಿ. ಅಬಕಾರ ವರ್ತಕರು, ಬನಹಟ್ಟಿ ೫ ೦ ೦
೨೨. ,, ಶ್ರೀನಿವಾಸರಾವ ಪೋತದಾರ ಆರ್ಟಿಸ್ಟ ವಾಳಮುಡ್ತಿ ೫ ೦ ೦

---

# ಮನೋಹರ ಗ್ರಂಥಮಾಲೆಯ ಪ್ರಕಟನೆಗಳು

ವರ್ಷದಲ್ಲಿ ೧೫೦ ಪುಟಗಳುಳ್ಳ ಆರು ಸರಸ ಗ್ರಂಥಗಳು

ವಾರ್ಷಿಕ ಚಂದಾ ಅ. ವೆ. ಸೇರಿ ೩--೮--೦ ಮಾತ್ರ

| | | | | | |
|---|---|---|---|---|---|
| ೧ | ಸುದರ್ಶನ (ಕಾದಂಬರಿ) | ಆನಂದಕಂದ ತೀರಿವೆ | ೦ | ೧೨ | ೦ |
| ೨ | ನವಿಲುಗರಿ (ಸಣ್ಣಕತೆಗಳ ಸಂಗ್ರಹ) | ಬೇರೆ ಬೇರೆ ಕತೆಗಾರರು | ೦ | ೧೨ | ೦ |
| ೩ | ತ್ರಿಪುರದಹನ | ಎಂ. ಎ. ದೊರೆಸ್ವಾಮಿ ಐಯಂಗಾರ ಎಂ. ಎ. ಬಿ. ಎಲ್. | ೦ | ೧೨ | ೦ |
| ೪ | ಜಾಳುರಿ (ಕಾದಂಬರಿ) | ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. | ೦ | ೧೨ | ೦ |
| ೫ | ಬ್ರಾಹ್ಮಣರ ಹುಡುಗಿ (ಕಾದಂಬರಿ) | ಆರ್. ವ್ಯಾಸರಾವ | ೦ | ೧೨ | ೦ |
| ೬ | ವಿಶ್ವಾಮಿತ್ರನ ಸೃಷ್ಟಿ ಭಾಗ ೧ (ಕಾದಂಬರಿ) | ಶ್ರೀರಂಗ | ೦ | ೧೨ | ೦ |
| ೭ | ,, ,, ,, ೨ ,, | ,, | ೧ | ೦ | ೦ |
| ೮ | ಜೀವನ (ಸಣ್ಣಕತೆಗಳ ಸಂಗ್ರಹ) | ಕೃಷ್ಣಕುಮಾರ ಕಾಶ್ಯಪ ಎಂ. ಎ. | ೦ | ೧೨ | ೦ |
| ೯ | ಕಾಳರಾತ್ರಿ (ಆಧ್ಯಾತ್ಮಿಕ ಕಥೆ) | ಮಧುರಚೆನ್ನರು | ೦ | ೧೨ | ೦ |
| ೧೦ | ಧರ್ಮಸೆರೆ (ಕಾದಂಬರಿ) | ಜಡಭರತ | ೦ | ೧೪ | ೦ |
| ೧೧ | ರಾಜಯೋಗಿ (ಐತಿಹಾಸಿಕ ಕಾದಂಬರಿ) | ಆನಂದಕಂದ | ೦ | ೧೪ | ೦ |
| ೧೨ | ಕೋಲ್ಮಿಂಚು (ಏಕಾಂಕನಾಟಕ ಸಂಗ್ರಹ) | ಬೇರೆ ಬೇರೆಯವರು | ೧ | ೦ | ೦ |
| ೧೩ | ಇಜ್ಜೋಡು ಭಾಗ ೧ (ಕಾದಂಬರಿ) | ಪ್ರೊ. ವಿ. ಕೃ. ಗೋಕಾಕ ಎಂ. ಎ. | ೦ | ೧೨ | ೦ |
| ೧೪ | ಇಜ್ಜೋಡು ಭಾಗ ೨ ,, | ,, ,, | ೦ | ೧೨ | ೦ |
| ೧೫ | ಕುರಿಹಿಂಡು (ವಿಡಂಬನೆಗಳು ಸಚಿತ್ರ) | ಜಲಧರ | ೧ | ೦ | ೦ |
| ೧೬ | ಧೂಮಕೇತು (ಕಾದಂಬರಿ) | ಕಡೆಂಗೊಡ್ಲು ಶಂಕರಭಟ್ಟ | ೦ | ೧೪ | ೦ |
| ೧೭ | ಧರ್ಮಜ್ಯೋತಿ | ಮ. ಅ. ದೊರೆಸ್ವಾಮಿ ಅಯ್ಯಂಗಾರ ಎಂ. ಎ. ಬಿ. ಎಲ್. | ೧ | ೪ | ೦ |
| ೧೮ | ಸೇವಾಪ್ರದೀಪ (ಐತಿಹಾಸಿಕ ನಾಟಕ) | ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. | ೦ | ೧೨ | ೦ |
| ೧೯ | ದಿಲ್ಲೀಶ್ವರನ ದಿನಚರಿ | ನಾ. ಕಸ್ತೂರಿ ಎಂ. ಎ. ಬಿ. ಎಲ್. | ೦ | ೧೨ | ೦ |
| ೨೦ | ಪುಷ್ಪಮಾಲೆ | ಶ್ರೀ. ಸ್ವಾಮಿ, ಬೆಂಗಳೂರು | ೦ | ೧೨ | ೦ |
| ೨೧ | ಸೋಲೋ ಗೆಲುವೋ | ದೇವುಡು | ೦ | ೧೨ | ೦ |
| ೨೨ | ಹಳ್ಳಿಯ ಸಮಾಜ | ಆರ್. ವ್ಯಾಸರಾವ | ೦ | ೧೪ | ೦ |
| ೨೩ | ಪಾವನ-ಪಾವಕ | ರಂ. ಶ್ರೀ. ಮುಗಳಿ | ೦ | ೮ | ೦ |
| ೨೪ | ಸಮುದ್ರದಾಚೆಯಿಂದ | ವಿ. ಕೃ. ಗೋಕಾಕ | ೧ | ೦ | ೦ |
| ೨೫ | ಸರಸಮ್ಮನ ಸಮಾಧಿ | ಶ್ರೀ. ಕೋ. ಶಿ. ಕಾರಂತ | ೦ | ೧೨ | ೦ |
| ೨೬ | ಎರಡು ಧ್ರುವ (ಭಾಗ ೧) | ವ್ಹಿ. ಎಂ. ಇನಾಮದಾರ | ೧ | ೦ | ೦ |
| ೨೭ | ,, ,, (ಭಾಗ ೨) | (ಅಚ್ಚಿನಲ್ಲಿ) | | | |
| ೧ | ಸಾಹಿತ್ಯ ಮತ್ತು ವಿಮರ್ಶೆ | ಶ್ರೀ. ದ. ರಾ. ಬೇಂದ್ರೆ ಎಂ. ಎ. | ೦ | ೧೨ | ೦ |
| ೨ | ಪಯಣ (ಕವನಸಂಗ್ರಹ) | ಪ್ರೊ. ವಿ. ಕೃ. ಗೋಕಾಕ ಎಂ. ಎ. | ೦ | ೧೨ | ೦ |
| ೩ | ತಿರುಪಾಣಿ (ಗೀತಪ್ರಧಾನ ನಾಟಕ) | 'ಶ್ರೀನಿವಾಸ' | ೦ | ೮ | ೦ |

# RECOMMENDED

*by*

# Department of Public Instruction

*(Government of Mysore)*

The following books of Manohara Grantha Prakashana Samiti, Dharwar are recommended for the libraries of schools noted against each :

| ಹೆಸರು | for the libraries of High-Dist-normal-Middle SCHOOL | | | and Training Colleges |
|---|---|---|---|---|
| ತ್ರಿಪುರದಹನ | ,, | ,, | ,, | — |
| ಬಾಳುರಿ | ,, | ,, | ,, | ,, |
| ಬ್ರಾಹ್ಮಣರ ಹುಡುಗಿ | ,, | — | — | — |
| ವಿಶ್ವಾಮಿತ್ರನ ಸೃಷ್ಟಿ | ,, | ,, | — | ,, |
| ಜೀವನ | ,, | ,, | ,, | ,, |
| ಕಾಳರಾತ್ರಿ | ,, | ,, | — | ,, |
| ಧರ್ಮಸೆರೆ | ,, | ,, | ,, | ,, |
| ರಾಜಯೋಗಿ | ,, | ,, | ,, | ,, |
| ಕೋಲ್ಮಿಂಚು | ,, | ,, | ,, | ,, |
| ಇಜ್ಜೋಡು | ,, | ,, | ,, | ,, |
| ಕುರಿಹಿಂಡು | — | ,, | — | ,, |
| ಧರ್ಮಜ್ಯೋತಿ | ,, | ,, | — | ,, |
| ದಿಲ್ಲೀಶ್ವರನ ದಿನಚರಿ | ,, | ,, | ,, | ,, |
| ಪುಷ್ಪಮಾಲೆ | ,, | ,, | ,, | ,, |
| ಸೋಲೋ ಗೆಲುವೊ | ,, | ,, | — | ,, |
| ಸಾಹಿತ್ಯ ಮತ್ತು ವಿಮರ್ಶೆ | ,, | ,, | — | ,, |
| ಪಯಣ | ,, | ,, | — | ,, |

# ಬಿಡಿಮುತ್ತುಗಳು

**ಬೇಗನೆ ಬರೆದು ತರಿಸಿಕೊಳ್ಳಿರಿ !**

## ಸಾಹಿತ್ಯ ಮತ್ತು ವಿಮರ್ಶೆ ೦-೧೨-೦

**ದ. ರಾ. ಬೇಂದ್ರೆ**, ಎಂ. ಎ.

" ಇವುಗಳಲ್ಲಿ ಸಾಹಿತ್ಯ ಮತ್ತು ವಿಮರ್ಶೆಯ ತತ್ವಗಳನ್ನು ಕುರಿತು ಹೋದ ಹನ್ನೆರಡು ವರ್ಷಗಳಲ್ಲಿ ನನ್ನಲ್ಲಾದ ವಿಚಾರ ಪರಿಪಾಕವನ್ನು ಕಾಣಬಹುದು. ನನ್ನ ರುಚಿಧರ್ಮವು ಇವುಗಳಲ್ಲಿ ರೂಪುಗೊಂಡಿದೆ. ಆದರೂ ಇಂದಿನ ವಿಮರ್ಶೆಯ ವಿಚಾರಾಂದೋಲನದಲ್ಲಿ ನನ್ನದೊಂದು ಲಹರಿಯಿದು; ಗೊಂದಣದಲ್ಲಿ ನಾನಿಕ್ಕಿದ ಹೆಜ್ಜೆ; ಸಮುದಾಯ ಸಂಗೀತದಲ್ಲಿ ನಾನೆತ್ತಿದ ಸ್ವರ. ಆದಕ್ಕೊಂದು ಸಾಮಾನ್ಯತೆಯಿದೆ, ವಿಶಿಷ್ಟತೆಯಿದೆ. "

## ಪಯಣ ( ಭಾವಗೀತಗಳ ಸಂಗ್ರಹ ) ೦-೧೨-೦

**ವಿ. ಕೃ. ಗೋಕಾಕ** ಎಂ, ಎ.

## ತಿರುಪಾಣಿ ( ಗೀತಪ್ರಧಾನ ನಾಟಕ ) ೦- ೮-೦

**' ಶ್ರೀನಿವಾಸ '**

' ತಿರುಪಾಣಿ ' ಎಂಬ ಈ ರೂಪಕವು ಗೀತಪ್ರಧಾನವಾದುದು. ಗ್ರಂಥಕರ್ತರು ಗೀತಮಯವಾಗಿ ಈ ಕೃತಿಯನ್ನು ರಚಿಸಬೇಕೆಂದು ಆಶೆಯಿಟ್ಟುಕೊಂಡಿದ್ದರೂ ಮಾತುಗಳು ಸಹಜವಾಗಿ ಇದರಲ್ಲಿ ಭಾವದ ಹೂಗಳ ಸುತ್ತಲು ಹರಹಿಕೊಂಡ ಎಲೆಗಳ ಪಸರದಂತೆ ಇದಕ್ಕೊಂದು ಪೂರ್ಣಸೌಂದರ್ಯವನ್ನೆ ತಂದಿವೆ. ' ಸುಬ್ಬಣ್ಣ 'ನ ಜೀವಮಾನದುದ್ದಕ್ಕೂ ಅದರ ರೀತಿಯನ್ನು ನಿರೂಪಿಸಿದ ಕೈಯೆ ಇಲ್ಲಿ ತಿರುಪಾಣಿಯ ಜೀವನದ ಕೊನೆದಿನದ ಭಾವದ ಹೂಗೊಂಚಲನ್ನು ಅರಳಿಸಿದೆ. ಒಳಗೆ ಪೂರ್ಣವಾದ ಒಂದು ಜೀವವು ಪ್ರಪಂಚದ ಕಣ್ಣಿಗೂ ಲೆಕ್ಕಕ್ಕೂ ಪೂರ್ಣವಾದುದನ್ನೂ ಕೃತಾರ್ಥವಾದುದನ್ನೂ ಇಲ್ಲಿ ರೂಪಿಸಿದೆ.